ತಿಂಗಳ ಪತ್ರಿಕೆ
ಜುಲೈ 2001

# ಅಚಲ

## ಒಳಗೇನಿದೆ ?






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 16 ಸಂಚಿಕೆ - 7

ಸಂಪಾದಕ ಮಂಡಲಿ

ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಬಿ. ಎನ್. ಸುಮಿತ್ರಾಬಾಯಿ
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri
Published by
Dr. G. Ramakrishna on behalf of Jagruthi Mahila Adhyayana Kendra

*Printed at*
Lipi Mudrana
Bangalore - 560 004


ಆತ್ಮೀಯರೇ,

ಕಳೆದ 15 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

**ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ.ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ. ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.**

ಅಚಲದ ಚಂದಾ ವಿವರಗಳು ಹೀಗಿವೆ :

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

ಗಮನಿಸಿ

ಅಚಲ ವಿಳಾಸ ಬದಲಾಗಿದೆ

108, ಸ್ಕೈಲೈನ್ ಸುರಭಿ, 14-ಬಿ, ವಿದ್ಯಾಪೀಠ ರಸ್ತೆ, ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಮಹಿಳೆ ಮತ್ತು ಸಾಮಾಜಿಕ ಭದ್ರತೆ

ಗಂಡನಿಂದ ಪರಿತ್ಯಕ್ತಳಾಗಿದ್ದ ಷಾಬಾನೂ ಎನ್ನುವ ವೃದ್ದಾಪ್ಯಕ್ಕೆ ಕಾಲಿಡುತ್ತಿದ್ದ ಒಬ್ಬ ಮುಸ್ಲಿಂ ಮಹಿಳೆ, ತನ್ನ ಶ್ರೀಮಂತ ವಕೀಲ ಗಂಡನಿಂದ ಜೀವನಾಂಶವನ್ನು ಕೇಳಿದಾಗ, ದಂಡ ಪ್ರಕ್ರಿಯಾ ಸಂಹಿತೆಯ 125ನೇ ಪ್ರಕರಣದಡಿ ಮ್ಯಾಜಿಸ್ಟ್ರೇಟರು ಅವಳಿಗೆ ಕೊಟ್ಟಿದ್ದು 25ರೂ. ತಿಂಗಳಿಗೆ. ಆದರೆ ಅಷ್ಟು ಚಿಕ್ಕ ಮೊತ್ತವನ್ನೂ ತನ್ನ ಮಕ್ಕಳ ತಾಯಿಗೆ ಕೊಡಲು ಮನಸ್ಸು ಬಾರದ ಗಂಡ ಪ್ರಕರಣವನ್ನು ಸರ್ವೋಚ್ಚ ನ್ಯಾಯಾಲಯದವರೆಗೂ ತೆಗೆದುಕೊಂಡು ಹೋಗಿ, ಮುಸ್ಲಿಂ ಕಾನೂನಿನಲ್ಲಿ (ಶರೀಯತ್) ವಿಚ್ಛೇದಿತ ಮಹಿಳೆಗೆ ಎರಡು ತಿಂಗಳ 'ಇದ್ದತ್' ಸಮಯದಲ್ಲಿ ಮಾತ್ರ ಜೀವನಾಂಶ ಪಡೆಯಲು ಹಕ್ಕಿರುವುದು, ಆದ್ದರಿಂದ ದಂಡ ಪ್ರಕ್ರಿಯಾ ಸಂಹಿತೆಯ 125ನೇ ಪ್ರಕರಣದಡಿ ಅಂತಹ ಮುಸ್ಲಿಂ ಮಹಿಳೆಯರಿಗೆ ಜೀವನಾಂಶ ಕೊಡಲು (ಇದ್ದತ್ ಸಮಯದ ನಂತರ) ನ್ಯಾಯಾಲಯಕ್ಕೆ ಅಧಿಕಾರವಿಲ್ಲ ಎಂದು ವಾದಿಸಿದ. ಈ ವಾದವನ್ನು ಮಾನವತಾವಾದದ ಆಧಾರದ ಮೇಲೆ ತಳ್ಳಿ ಹಾಕಿದ ಸರ್ವೋಚ್ಚನ್ಯಾಯಾಲಯ, ತನ್ನ ತೀರ್ಪಿಗೆ ಕುರಾನಿನ ಅನೇಕ ಹೇಳಿಕೆಗಳ ಬೆಂಬಲವನ್ನೂ ಉದ್ಧರಿಸಿತು. ಉದಾರವಾದಿ ಮುಸ್ಲಿಂರನ್ನೊಳಗೊಂಡಂತೆ ಅನೇಕರು ಈ ತೀರ್ಪನ್ನು ಮೆಚ್ಚಿಕೊಂಡರು, ಸ್ವಾಗತಿಸಿದರು. ಆದರೆ, ಭಾರತದ ನ್ಯಾಯಾಲಯವೊಂದು ಕುರಾನನ್ನು ಅರ್ಥೈಸುವ ಪ್ರಯತ್ನ ಮಾಡಿದುದು ಕೆಲವು ಮೂಲಭೂತವಾದಿ ಮುಸ್ಲಿಂ ಧಾರ್ಮಿಕ ನಾಯಕರ, ಅಂತಹ ಸಂದರ್ಭಗಳನ್ನು ತಮ್ಮ ಲಾಭಕ್ಕೆ ಬಳಸಿಕೊಳ್ಳುವ ಮುಸ್ಲಿಂ ರಾಜಕೀಯ ಧುರೀಣರ ಕಣ್ಣನ್ನು ಕೆಂಪಾಗಿಸಿತು. ತಮ್ಮ ಧಾರ್ಮಿಕ ವಿಷಯದಲ್ಲಿ ಹಸ್ತಕ್ಷೇಪ ಮಾಡುವ ಅಧಿಕಾರ ನ್ಯಾಯಾಲಯಗಳಿಗೆ ಇಲ್ಲ ಎಂದು ಈ ಜನರು ಕೂಗೆಬ್ಬಿಸಿದರು. ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪು ತಮ್ಮ ಶರೀಯತ್ ಕಾನೂನಿಗೆ ವಿರುದ್ಧವಾಗಿದೆ ಎಂದು ಖಂಡಿಸಿದರು. ಆರಂಭದಲ್ಲಿ ಆಗಿನ ಪ್ರಧಾನಿ ರಾಜೀವ್‌ಗಾಂಧಿ ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಬೆಂಬಲಿಸಿದರು. ಅವರ ಕಾಂಗ್ರೆಸ್‌ನ ಮುಸ್ಲಿಂ ನಾಯಕರಿಗೆ ಮೂಲಭೂತವಾದಿಗಳ ವಾದವನ್ನು ತಿರಸ್ಕರಿಸಲು ಪ್ರೋತ್ಸಾಹಕೊಟ್ಟರು. ಆದರೆ, ಮಾನವತೆಗೆ ಸಂಬಂಧಿಸಿದ ವಿಷಯವನ್ನು ಮೂಲಭೂತವಾದಿಗಳು ಧಾರ್ಮಿಕ ವಿಷಯವಾಗಿ, ಅಲ್ಪಸಂಖ್ಯಾತರ ಪ್ರತಿಷ್ಠೆಯ ಪ್ರಶ್ನೆಯಾಗಿ ಪರಿವರ್ತಿಸುವುದನ್ನು ಕಂಡು ಕಂಗೆಟ್ಟು ಅವರಿಗೆ ಶರಣಾದರು. ಫಲವಾಗಿ ಬಂದುದೇ ಮುಸ್ಲಿಂ ಮಹಿಳೆಯರ (ವಿಚ್ಛೇದಿತ ನಂತರದ ಹಕ್ಕುಗಳ ರಕ್ಷಣೆ) ಅಧಿನಿಯಮ, 1986. ಹೆಸರಿನಲ್ಲಿಯೇ ಎಷ್ಟು ವಿಪರ್ಯಾಸವಿದೆ. ಮುಸ್ಲಿಂ ವಿಚ್ಛೇದಿತ ಮಹಿಳೆಯರ ಹಕ್ಕನ್ನು ಕಿತ್ತುಕೊಳ್ಳುವ ಕಾನೂನಿಗೆ ಈ ಹೆಸರು! ಈ ಹೊಸ ಕಾನೂನು ಶರೀಯತ್ ಕಾನೂನಿನ ಅಂಶಗಳನ್ನು ಒಳಗೊಂಡಿದೆ.

ಈ ಹೊಸ ಕಾನೂನಿನ ಪ್ರಕಾರ, ವಿಚ್ಛೇದಿತ ಮುಸ್ಲಿಂ ಮಹಿಳೆಗೆ ಮತ್ತು ಅವಳ ಮಕ್ಕಳಿಗೆ ಅವಳ ಮಾಜಿಗಂಡ ಇದ್ದತ್ ಸಮಯದಲ್ಲಿ ಸೂಕ್ತವಾದ ಜೀವನಾಂಶದ ಏರ್ಪಾಡು ಮಾಡದಿದ್ದರೆ ಮ್ಯಾಜಿಸ್ಟ್ರೇಟರು ಗಂಡನ ವರಮಾನ ನೋಡಿಕೊಂಡು ಅವಳಿಗೆ ಮತ್ತು ಮಕ್ಕಳಿಗೆ ಜೀವನಾಂಶ ಕೊಡುವ ಬಗ್ಗೆ ಆಜ್ಞೆ ಮಾಡಬಹುದಾಗಿದೆ. ಹಾಗೆಯೇ ಅವಳ ಮರಣಾನಂತರ ಅವಳ ಆಸ್ತಿಗೆ ವಾರಸುದಾರರಾಗಬಹುದಾದ ಸಂಬಂಧಿಕರಿಂದ ಜೀವನಾಂಶ ಕೊಡಿಸುವ ಆಜ್ಞೆ ಮಾಡಬಹುದಾಗಿದೆ. ಆ ಸಂಬಂಧಿಕರಿಗೆ ಆ ಹಣ ಕೊಡಲು ಆರ್ಥಿಕಶಕ್ತಿ ಇಲ್ಲದಿದ್ದಲ್ಲಿ ರಾಜ್ಯ ವಕ್ಫ್‌ಬೋರ್ಡ್ ಕೊಡುವಂತೆ ಆಜ್ಞೆ ಮಾಡಬಹುದಾಗಿದೆ.

1986ರಲ್ಲಿಯೇ ಈ ಕಾನೂನು ಬಂದಿದ್ದರೂ ಈವರೆಗೆ ವಕ್ಫ್‌ಬೋರ್ಡ್ ನಿರ್ಲಿಪ್ತವಾಗಿತ್ತು. ಬಹುಶಃ ಯಾವ ಮುಸ್ಲಿಂ ಮಹಿಳೆಯರೂ ಅಲ್ಲಿಗೆ ಅರ್ಜಿ ಹಾಕಿರಲಾರರು, ತಮ್ಮ ವಾರಸುದಾರರಾಗುವವರನ್ನೂ ಕೇಳಿರಲಾರರು. ಆದರೆ, ನ್ಯಾಯಾಲಯ ಪುನಃ ಇಂತಹ ಅಸಹಾಯ ಮುಸ್ಲಿಂ ಮಹಿಳೆಯರ ನೆರವಿಗೆ ಬಂದು 'ಇದ್ದತ್ ಸಮಯದಲ್ಲಿ ಸೂಕ್ತವಾದ ಜೀವನಾಂಶದ ಏರ್ಪಾಡನ್ನು ಮಾಡಬೇಕು' ಎಂಬ ಕಾನೂನನ್ನು ಅರ್ಥೈಸುತ್ತಾ, ಇದ್ದತ್‌ನ ಎರಡು ತಿಂಗಳಿಗೆ ಮಾತ್ರ ಹೆಂಡತಿಗೆ ಜೀವನಾಂಶ ಕೊಡಬೇಕಾದುದು ಗಂಡನ ಹೊಣೆಗಾರಿಕೆ, ನಂತರ ಆ ಹೊಣೆಗಾರಿಕೆ ಇರುವುದಿಲ್ಲ ಎಂಬುದು ಅದರ ಅರ್ಥವಲ್ಲ, ಅವಳ ಮತ್ತು ಮಕ್ಕಳ ಮುಂದಿನ ಜೀವನಕ್ಕೆ ಬೇಕಾಗುವ ಸೂಕ್ತ ಜೀವನಾಂಶದ ವ್ಯವಸ್ಥೆಯನ್ನು ಆ ಎರಡು ತಿಂಗಳ ಇದ್ದತ್ ಸಮಯದಲ್ಲಿ ಮಾಡಬೇಕು ಎಂಬುದು ಅದರ ಅರ್ಥ, ಗಂಡ ಅದನ್ನು ನೋಡದಿದ್ದರೆ ನ್ಯಾಯಾಲಯ ಗಂಡನಿಗೆ ಆ ಬಗ್ಗೆ ಸೂಕ್ತ ಆಜ್ಞೆ ನೀಡುತ್ತದೆ ಎಂದು ತೀರ್ಪು ನೀಡಿದೆ, ಆ ಪ್ರಕಾರ ಮುಸ್ಲಿಂ ಮಹಿಳೆಯರಿಗೆ ರಕ್ಷಣೆಯನ್ನು ನೀಡುತ್ತಿದೆ. ಹಾಗಾಗಿ ವಕ್ಫ್‌ಬೋರ್ಡಿಗೆ ಹೋಗುವ ದುರ್ದೆಶೆ ಆ ಮಹಿಳೆಯರಿಗೆ ಬಂದಿಲ್ಲ.

ಇದ್ದಕ್ಕಿದ್ದಂತೆ ಇತ್ತೀಚೆಗೆ ನಮ್ಮ ರಾಜ್ಯ ಸರ್ಕಾರಕ್ಕೆ ಈ ಕಾನೂನಿನ, ಅದರಡಿ ವರ್ಕ್ಫ್‌ಬೋರ್ಡಿನ ಕರ್ತವ್ಯದ ನೆನಪಾದಂತಿದೆ ಯಾವುದೇ ಪೂರ್ವಾಪರ ಯೋಜನೆಯೂ ಇಲ್ಲದೇ 25 ಲಕ್ಷ ರೂ.ಗಳನ್ನು ಧಿಡೀರನೆ ರಾಜ್ಯ ವರ್ಕ್ಫ್‌ಬೋರ್ಡಿಗೆ ವಿಚ್ಛೇದಿತ ಮುಸ್ಲಿಂ ಮಹಿಳೆಯರ ಜೀವನಾಂಶಕ್ಕಾಗಿ ಕೊಡಮಾಡಿದೆ. ನ್ಯಾಯಾಲಯ ಹೊಸ ಕಾನೂನಿನ ಪ್ರಕಾರವೇ ಗಂಡಂದಿರಿಂದ ಜೀವನಾಂಶ ಕೊಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೇ? ಈವರೆಗೆ ಇಂತಹ ಎಷ್ಟು ಅರ್ಜಿಗಳು ರಾಜ್ಯ ವರ್ಕ್ಫ್‌ಬೋರ್ಡಿಗೆ ಬಂದಿವೆ? ಈ ಹಣದ ವಿಲೇವಾರಿ ಹೇಗೆ? ಇಂತಹ ಅಸಹಾಯ ಮಹಿಳೆಯರು - ಮಕ್ಕಳು ಮುಸ್ಲಿಂ ಸಮುದಾಯದಲ್ಲಿ ಮಾತ್ರ ಇದ್ದಾರೆಯೆ? ಬೇರೆ ಧಾರ್ಮಿಕ ಸಮುದಾಯಗಳಲ್ಲೂ ಇಲ್ಲವೆ? ಅಲ್ಪಸಂಖ್ಯಾತರಿಗೆ ಮಾತ್ರ ಎಂದಾದರೆ ಕ್ರಿಶ್ಚಿಯನ್ - ಪಾರ್ಸಿಗಳು ಇಲ್ಲವೆ? ರಾಜಕೀಯದ ವಾಸನೆ ಮೂಗಿಗೆ ತಲುಪುತ್ತಿಲ್ಲವೆ? ಈ ಹಣ ಅದೇ ಉದ್ದೇಶಕ್ಕೆ ಬಳಕೆಯಾಗುವುದೆ? ಸತ್ಪಾತ್ರರನ್ನು ತಲುಪುವುದೆ? (10ನೇ ಪುಟಕ್ಕೆ)

# ಅಪರಿಪೂರ್ಣ ಮಸೂದೆ

ಕೇಂದ್ರ ಕಾನೂನು ಸಚಿವಾಲಯವು ಮಹಿಳೆಯರ ಹಿತದೃಷ್ಟಿಯಿಂದ ವಿಚ್ಛೇದನ ಮತ್ತು ಜೀವನ ನಿರ್ವಹಣೆಯನ್ನು ಕುರಿತಂತೆ ಮಸೂದೆಯನ್ನು ಮಂಡಿಸುವ ಸಿದ್ಧತೆ ನಡೆಸಿದೆ. ಈ ಮಸೂದೆಯ ಕ್ರಿಮಿನಲ್ ಪ್ರೊಸೀಜರ್‌ಕೋಡ್‌ನ ಸೆಕ್ಷನ್ 125ಕ್ಕೆ ತಿದ್ದುಪಡಿ ತರುವ ಆಲೋಚನೆ ನಡೆಸಿದೆ. ಈ ತಿದ್ದುಪಡಿಯನ್ವಯ ಈಗಿರುವ ತಿಂಗಳ ನಿರ್ವಹಣಾಭತ್ಯೆಯ ಗರಿಷ್ಟ ಮಿತಿ 500 ರೂಗಳನ್ನು ಬದಲಿಸುವ ನಿಟ್ಟಿನಲ್ಲಿ ಆಲೋಚಿಸಿದೆ. ಈ ಗರಿಷ್ಟ ಮಿತಿಯನ್ನು ನಿರ್ಧರಿಸಿದ್ದು 1955ರಲ್ಲಿ ಮತ್ತು 1973ರಲ್ಲಿನ ಕ್ರಿಮಿನಲ್ ಪ್ರೊಸೀಜರ್‌ಕೋಡ್‌ನಲ್ಲಿಯೂ ಹಾಗೆಯೇ ಉಳಿಸಿ ಕೊಳ್ಳಲಾಗಿದೆ.

ನಿರ್ವಹಣಾಭತ್ಯೆಯಲ್ಲಿ ಹೆಚ್ಚಳವಾಗಬೇಕೆಂಬುದು ಮಹಿಳಾ ಚಳುವಳಿಯು ಬಹಳ ದಿನಗಳಿಂದ ಕೇಳುತ್ತಾ ಬಂದಿರುವ ಬೇಡಿಕೆಯಾಗಿದೆ. 1974ರಷ್ಟು ಹಿಂದೆಯೇ ಈ ವಿಷಯವನ್ನು 'ಭಾರತೀಯ ಮಹಿಳೆಯರ ಸ್ಥಾನಮಾನವನ್ನು ಕುರಿತ ಸಮಿತಿಯು ತನ್ನ ವರದಿಯಾದ 'ಸಮಾನತೆಯೆಡೆಗೆ'ಯಲ್ಲಿ ಪ್ರಸ್ತಾಪಿಸಿದೆ. ಕ್ರಿಮಿನಲ್ ಪ್ರೊಸೀಜರ್‌ಕೋಡ್‌ನಲ್ಲಿಯೇ ನಿರ್ವಹಣಾಭತ್ಯೆಯನ್ನು ಸೇರಿಸಿರುವುದು ನಿಜವಾದ ಅರ್ಥದಲ್ಲಿ ಆ ಪ್ರಕ್ರಿಯೆಯನ್ನು ಅತ್ಯಂತ ಶೀಘ್ರವಾಗಿ ಮತ್ತು ಅಗ್ಗವಾಗಿ ದೊರಕುವಂತೆ ಮಾಡುವ ಪ್ರಯತ್ನವಾಗಿದೆ. ಈ ದೃಷ್ಟಿಯಿಂದ ನೋಡಿದಾಗ ನಿರ್ವಹಣಾಭ್ಯತೆಯ ಗರಿಷ್ಟ ಮಿತಿಯನ್ನು 500ರೂಗಳಿಗೆ ನಿಗಧಿಪಡಿಸಿರುವುದು ಅನ್ಯಾಯ ಮಾಡಿದಂತೆಯೇ.

ಈಗ ತಿದ್ದುಪಡಿ ತರಲಿರುವ ಮಸೂದೆಯಲ್ಲಿ ನಾಲ್ಕು ಭಾಗಗಳಿವೆ: 1869ರ ಭಾರತೀಯ ವಿವಾಹ ಕಾಯಿದೆಯ ಸೆಕ್ಷನ್ 36, 1955ರ ಹಿಂದೂ ವಿವಾಹ ಕಾಯಿದೆಯ ಸೆಕ್ಷನ್ 24, 1936ರ ಪಾರ್ಸಿ ವಿವಾಹ ಮತ್ತು ವಿಚ್ಛೇದನ ಕಾಯಿದೆಯ ಸೆಕ್ಷನ್ 39 ಮತ್ತು ಕೊನೆಯದಾಗಿ ವಿಶೇಷ ವಿವಾಹ ಕಾಯಿದೆಯ ಸೆಕ್ಷನ್ 39 - ಈ ನಾಲ್ಕು ವಿಭಾಗಗಳಲ್ಲಿ ತಿದ್ದುಪಡಿಗಳನ್ನು ತರಲು ಉದ್ದೇಶಿಸಿದೆ. ಈ ಸಂಬಂಧವಾಗಿ ಬಂದ ಅರ್ಜಿಗಳನ್ನು 60 ದಿನಗಳೊಳಗೇ ಪರಿಹರಿಸಬೇಕೆಂಬ ನಿರ್ಧಾರವೂ ಸೇರಿರುವುದರಿಂದ ಶೀಘ್ರದಲ್ಲೇ ಸಮಸ್ಯೆಗೆ ಪರಿಹಾರವು ದೊರೆಯುವುದು.

ಇಷ್ಟಾದರೂ ಮುಸ್ಲಿಂ ಮಹಿಳೆಯರಿಗೆ ನಿರ್ವಹಣಾ ಭತ್ಯೆಯನ್ನು ಕೊಡುವುದರ ಬಗ್ಗೆ ಈ ಮಸೂದೆಯ ಮೌನವಹಿಸಿದೆ. 1986ರ ಮುಸ್ಲಿಂ ಮಹಿಳೆಯರ ಕಾಯಿದೆ (ವಿವಾಹ ವಿಚ್ಛೇದನದ ರಕ್ಷಣೆಯ ಕಾಯಿದೆ)ಯ ಶಾಬಾನೋ ಪ್ರಕರಣದ ಸುಪ್ರೀಂಕೋರ್ಟಿನ ತೀರ್ಪಿನ ನಂತರದ ಬೆಳವಣಿಗೆಯ ಫಲವಾಗಿ ಕಾನೂನಾಯಿತು.

ಈ ಕಾನೂನಿನ ಅಸಮರ್ಪಕತೆಯ ಬಗ್ಗೆ ಸಾಕಷ್ಟು ವಾದವಿವಾದಗಳಿವೆ. ಮೊಹಮದ್ ಅಹಮದ್ ಕಾನ್ V/s ಶಾಬಾನೋ ಬೇಗಂ ಮತ್ತು ಇತರರು ಪ್ರಕರಣದಲ್ಲಿ ವಿಚ್ಛೇದಿತ ಮಹಿಳೆಯು ತನ್ನನ್ನು ತಾನು ನಿರ್ವಹಿಸಿಕೊಳ್ಳುವಷ್ಟು ಸಮರ್ಥಳಿದ್ದಲ್ಲಿ, 'ಇದ್ದತ್'ನ ಅವಧಿಯ ನಂತರ ಹೆಂಡತಿಯ ರಕ್ಷಣೆ ಮಾಡಬೇಕಾದ ಗಂಡನ ಜವಾಬ್ದಾರಿ ಕೊನೆಗೊಳ್ಳುತ್ತದೆ. ಆದರೆ ಅವಳಿಗೆ ಜೀವನ ನಿರ್ವಹಣೆಗೆ ಯಾವುದೇ ಮಾರ್ಗವಿಲ್ಲದಿದ್ದಲ್ಲಿ, ಆಗ ಕ್ರಿಮಿನಲ್ ಪ್ರೊಸೀಜರ್‌ಕೋಡ್‌ನ 125ರನ್ವಯ ನಿರ್ವಹಣಾಭತ್ಯೆಗೆ ಅರ್ಹಳು. ಈ ತೀರ್ಪು ನಂತರ ಹಲವಾರು ವಿವಾದಗಳಿಗೆ ಎಡೆಮಾಡಿಕೊಟ್ಟು, ಒಟ್ಟಾರೆ ಶಾಬಾನೋ ಪ್ರಕರಣದಲ್ಲಿ ನ್ಯಾಯಾಲಯದ ತೀರ್ಪನ್ನು ಸಡಿಲಗೊಳಿಸಿತು. ಆದ್ದರಿಂದ ಮುಸ್ಲಿಂ ಮಹಿಳೆಯರ ಮಸೂದೆಯ ನಂತರ 1986ರ ಮುಸ್ಲಿಂ ಮಹಿಳೆಯರ (ವಿವಾಹ ವಿಚ್ಛೇದನದ ಹಕ್ಕುಗಳನ್ನು ರಕ್ಷಿಸುವ) ಕಾಯಿದೆಯಾಯಿತು. ಈ ಕಾಯಿದೆಯನ್ನು ಮಹಿಳಾ ಸಂಘಟನೆಗಳು ಕಟುವಾಗಿ ಟೀಕಿಸಿದವು. ಅವರ ಬಹುಮುಖ್ಯ ಟೀಕೆಯೆಂದರೆ, ಸೆಕ್ಯುಲರ್ ಆದ ಕ್ರಿಮಿನಲ್ ಪ್ರೊಸೀಜರ್‌ಕೋಡ್‌ನ ಲಾಭ ಪಡೆಯಬಲ್ಲ ಹಕ್ಕಿನಿಂದ ಮುಸ್ಲಿಂ ಮಹಿಳೆಯರು ವಂಚಿತರಾಗಿದ್ದಾರೆಂಬುದೇ ಬಹು ಮುಖ್ಯ ಅಂಶವಾಗಿತ್ತು.

ಮಹಿಳಾ ಸಂಘಟನೆಗಳು ಮತ್ತು ಪ್ರಗತಿ ಪರ ವೇದಿಕೆಗಳು ಮುಸ್ಲಿಂ ಮಹಿಳೆಯರಿಗೆ ಸೆಕ್ಯುಲರ್ ಕಾನೂನಿನ ಲಾಭ ಪಡೆಯುವ ಅವಕಾಶದಿಂದ ವಂಚಿತರಾಗುವ ಸ್ಥಿತಿ ಒದಗಿದ್ದು ಅನ್ಯಾಯವಾದ್ದು ಎಂದೇ ಅಭಿಪ್ರಾಯ ಪಟ್ಟರು. ಕಾನೂನಿನ ಕಣ್ಣಿನಲ್ಲಿ ಎಲ್ಲರೂ ಸಮಾನರು ಎಂಬ ಮೂಲಭೂತ ತತ್ವವನ್ನೇ ಈ ಕಾನೂನು ಉಲ್ಲಂಘಿಸಿತು. ಈ ಸಂದರ್ಭದಲ್ಲಿ ಮುಂಬಯಿಯ ಕಾನೂನು ಪ್ರಚಾರ ಕೇಂದ್ರವಾದ ಮಜಲಿಯು ಒಂದು Judgement call ಎಂಬ documentನ್ನು ಪ್ರಕಟಿಸಿತು. ಈ ದಾಖಲೆಯ ಪ್ರಕಾರ ಮುಸ್ಲಿಂ ಮಹಿಳೆಯ ಕಾಯಿದೆಯ ಪ್ರಕಾರ ಎರಡು ರೀತಿಯ ಪರಿಹಾರವನ್ನು ಉಚ್ಛನ್ಯಾಯಾಲಯದ ವ್ಯಾಪ್ತಿಗೆ ಬರುವಂತೆ ಸೂಚಿಸಲಾಗಿದೆ. ಮತ್ತೆ ಕೆಲವು ರಾಜ್ಯಗಳಲ್ಲಿ 'ಇದ್ದತ್'ನ ಅವಧಿಯೂ ಸೇರಿದಂತೆ ವಿವೇಚನಾಯುತವಾದ ಸೂಕ್ತ ಪರಿಹಾರ ದೊರಕಿದೆ. ಆದರೆ ಕೆಲವು ರಾಜ್ಯಗಳಲ್ಲಿ ಇದು 'ಇದ್ದತ್'ನ ಅವಧಿಗೆ ಮಾತ್ರ ಸೀಮಿತಗೊಂಡಿದೆ. 1986 ಮುಸ್ಲಿಂ ಮಹಿಳಾಕಾಯಿದೆಯನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ಆಗ ಅಖಿಲಭಾರತ ಮುಸ್ಲಿಂ ಪರ್ಸನಲ್ ಲಾ ಬೋರ್ಡ್ ತನ್ನ ನಿಲುವನ್ನು ಸಮರ್ಥಿಸಿಕೊಂಡಿತು.

ಈ ಕಾಯಿದೆ ರೂಪುಗೊಳ್ಳುವ ಸಂದರ್ಭದಲ್ಲೇ ಅದಕ್ಕೆ

ಮುಸ್ಲಿಂ ಸಮುದಾಯದ ಸಂಪೂರ್ಣ ಬೆಂಬಲ ದೊರಕಿರಲಿಲ್ಲ. ಆದ್ದರಿಂದಲೇ ಸಮಾನಸಿವಿಲ್ ಕಾಯಿದೆ, ಮತೀಯ ಕಾನೂನುಗಳಲ್ಲಿ ಸುಧಾರಣೆ, ಸೆಕ್ಯುಲರ್ ಕಾಯಿದೆಗಳನ್ನು ಸರ್ವರಿಗೂ ಅನ್ವಯಿಸಬೇಕೆಂಬ ಬೇಡಿಕೆ - ಇವು ಮತ್ತೆ ಮತ್ತೆ ಚರ್ಚೆಗೆ ಬರುತ್ತಲೇ ಇದ್ದವು. ಆದರೆ 1990ರಲ್ಲಿ ಬಾಬ್ರಿ ಮಸೀದಿಯನ್ನು ಉರುಳಿಸಿದ ನಂತರ ರೂಪುಗೊಂಡ ಅಲ್ಪಸಂಖ್ಯಾತರ ರಾಜಕೀಯದಲ್ಲಿ ಮತ್ತೆ ವಿಚ್ಛೇದಿತ ಮಹಿಳೆಯರ ನಿರ್ವಹಣಾ ಭತ್ಯೆಯ ವಿಷಯ ಹಿಂದೆ ಸರಿಯಿತು.

ಮಹಿಳೆಯರ ಅಭಿವೃದ್ಧಿ ಅಧ್ಯಯನ ಕೇಂದ್ರ (CWSD)ವು ಈಗ ಸೂಚಿಸಿರುವ ನಿರ್ವಹಣಾಭತ್ಯೆಯ ಗರಿಷ್ಟ ಮಿತಿಯನ್ನು ತೆಗೆದುಹಾಕಿರುವುದನ್ನು ಸ್ವಾಗತಿಸುತ್ತಲೇ, ಈ ತಿದ್ದುಪಡಿಯ ವ್ಯಾಪ್ತಿಯಲ್ಲಿ ಮುಸ್ಲಿಂ ಮಹಿಳೆಯರನ್ನು ಸೇರಿಸಿಲ್ಲದವರ ಬಗ್ಗೆ ವಿಷಾದ ವ್ಯಕ್ತಪಡಿಸಿದೆ. ಜಾಯಿಂಟ್ ವಿಮೆನ್ಸ್ ಪ್ರೋಗಾಂ (JWP) ಮತ್ತು ಮುಸ್ಲಿಂ ಮಹಿಳೆಯರ ಪೋರಂಗಳು ತಿದ್ದುಪಡಿ ತಂದಿರುವ ನಿರ್ವಹಣಾಭತ್ಯೆಯ ಕಾನೂನಿನ ಪ್ರಯೋಜನವನ್ನು ಮುಸ್ಲಿಂ ಮಹಿಳೆಯರಿಗೂ ವಿಸ್ತರಿಸಬೇಕೆಂಬ ಬೇಡಿಕೆಯನ್ನಿಟ್ಟಿದೆ. ಅಖಿಲಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ (AIDWA) ಸೆಕ್ಯುಲರ್ ಕಾನೂನುಗಳನ್ನು ವಿಸ್ತರಿಸಬೇಕೆಂಬ ಮತ್ತು ಮತೀಯ ಕಾನೂನುಗಳ ಸುಧಾರಣೆಗಳನ್ನು ಹೆಚ್ಚು ಲಿಂಗನ್ಯಾಯದ ಆಧಾರದ ಮೇಲೆ ನಡೆಸಬೇಕೆಂಬ ಬೇಡಿಕೆಯನ್ನಿಟ್ಟಿದೆ.

ನಿರ್ವಹಣಾಭತ್ಯೆಯ ತಿದ್ದುಪಡಿ ಮಸೂದೆಯನ್ನು ತರಲು ಉತ್ಸಾಹ ತೋರಿರುವ ಕೇಂದ್ರ ಕಾನೂನು ಸಚಿವಾಲಯದ ಕ್ರಮವನ್ನು ಸ್ವಾಗತಿಸಿರುವ AIDWA, ಈ ಕಾಯಿದೆಯನ್ನು ಕುರಿತಂತೆ ವಿವಾದಾತ್ಮಕ ಪರಿಸ್ಥಿತಿಯಿದ್ದಾಗ, ಹೆಂಡತಿಯ ಹೇಳಿಕೆಯನ್ನೇ ಮೊದಲು ಒಪ್ಪಿಕೊಳ್ಳಬೇಕು ಮತ್ತು ಅದು ಸುಳ್ಳೆಂಬುದು ಗಂಡನ ಅಭಿಪ್ರಾಯವಾದರೆ ಅದನ್ನು ನಿರಾಕರಿಸುವ ಜವಾಬ್ದಾರಿಯನ್ನೂ ಗಂಡನಿಗೇ ವಹಿಸಬೇಕು, ಎಂದಿದೆ.

ಈಗಿನ ತಿದ್ದುಪಡಿ ಮಸೂದೆಯಲ್ಲಿ ಮುಸ್ಲಿಂ ಮಹಿಳೆಯರನ್ನು ಬೇರ್ಪಡಿಸಿರುವುದರ ಬಗ್ಗೆ ವಿಷಾದ ವ್ಯಕ್ತಪಡಿಸುತ್ತಾ ಸುಪ್ರೀಂಕೋರ್ಟಿನ ವಕೀಲರಾದ ಸೋನಾಖಾನ್ 1986ರ ಮುಸ್ಲಿಂ ಮಹಿಳಾ ಕಾಯಿದೆಯ ಸಂವಿಧಾನಾತ್ಮಕತೆಯನ್ನೇ ಪ್ರಶ್ನಿಸಿದ್ದಾರೆ. ಶಾಬಾನೋ ಪ್ರಕರಣದಲ್ಲಿ ಆವರ ಪರವಾಗಿ ಸುಪ್ರೀಂಕೋರ್ಟಿನಲ್ಲಿ ವಾದಿಸಿದ ವಕೀಲರೊಬ್ಬರು ಈ ವಿಷಯಕ್ಕೆ ಸಂಬಂಧಿಸಿದಂತೆ ಮಾತನಾಡುತ್ತಾ, ಕ್ರಿಮಿನಲ್ ಪ್ರೊಸೀಜರ್‌ಕೋಡ್‌ನ 127 (3) (b) ಸೆಕ್ಷನ್ ಪ್ರಕಾರ, ಯಾವುದೇ ಮಹಿಳೆಯು ಮತೀಯ ಕಾನೂನಿನ್ವಯ ವಿಚ್ಛೇದನದ ಪರಿಹಾರವನ್ನು ಪಡೆಯುತ್ತಿದ್ದರೆ ಸೆಕ್ಷನ್ 125ರ ಪ್ರಕಾರ ನಿರ್ವಹಣಾಭತ್ಯೆಯನ್ನು ಕೇಳಲು ಅನರ್ಹಳಾಗುತ್ತಾಳೆ.

ಆದರೆ ಸುಪ್ರೀಂಕೋರ್ಟಿನ ನ್ಯಾಯವಾದಿಯಾದ ಸೋನಾಖಾನ್, ಮುಸ್ಲಿಂ ಮಹಿಳೆಯೊಬ್ಬಳು ಮದುವೆಯ ಸಂದರ್ಭದಲ್ಲಾಗಲೀ ಅಥವಾ ಮತ್ತಾವುದೇ ಸಂದರ್ಭದಲ್ಲಾಗಲೀ ಗಂಡನಿಂದ ಮೆಹರ್ ಪಡೆದಿದ್ದರೆ, ಅದನ್ನು ನಿರ್ವಹಣಾ ಪರಿಹಾರವೆಂದು ಪರಿಗಣಿಸಬಾರದೆಮದು ಹೇಳುತ್ತಾರೆ.

ಇಷ್ಟೆಲ್ಲ ವಿವಾದದ ನಂತರವೂ 1986ರ ಮುಸ್ಲಿಂ ಮಹಿಳೆಯರ ಕಾಯಿದೆಯನ್ನು ಬೆಂಬಲಿಸುತ್ತಲೇ ಬಂದಿರುವ ಅಖಿಲ ಭಾರತ ಮುಸ್ಲಿಮ್ ಪರ್ಸನಲ್ ಲಾ ಬೋರ್ಡ್ (AIMPLB) ಮತ್ತು ಅದರ ಸದಸ್ಯೆಯಾದ ಹಸೀನಾ ಹಷಿಯಾ ಮಾತ್ರ ಮುಸ್ಲಿಂ ಮಹಿಳೆಯರಿಗೆ 'ಇದ್ದತ್'ನ ಅವಧಿಯ ನಂತರ ಪರಿಹಾರ ಬೇಕಿಲ್ಲ ಎಂಬ ವಾದವನ್ನು ಸಮರ್ಥಿಸುತ್ತಾ ಬಂದಿದ್ದಾರೆ. ಜಮಿಯಾ ಮಿಲಿಯಾ ಇಸ್ಲಾಮಿಯಾ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಆಗಿರುವ ಇವರು ಕ್ರಿಮಿನಲ್ ಪ್ರೊಸೀಜರ್‌ಕೋಡ್ 125ನ ಸೆಕ್ಷನ್‌ನನ್ನು ಮುಸ್ಲಿಂ ಮಹಿಳೆಯರಿಗೆ ಅನ್ವಯಿಸಲಾಗದು, ಎಂದೇ ಅಭಿಪ್ರಾಯಪಡುತ್ತಾರೆ. 1986ರ ಕಾಯಿದೆಯ ಸೆಕ್ಷನ್ 5ರಲ್ಲಿ ವಿಚ್ಛೇದಿತ ಪತ್ನಿ ಮತ್ತು ಅವಳ ಗಂಡ ಇಬ್ಬರೂ ಒಮ್ಮತದಿಂದ ಒಪ್ಪಿಕೊಂಡಾಗ ಮಾತ್ರ ಅವರು ಕ್ರಿಮಿನಲ್ ಪ್ರೊಸೀಜರ್ ಕೋಡ್‌ನ ಸೆಕ್ಷನ್ 125 ಮತ್ತು 128ಕ್ಕೆ ಭಾದ್ಯರು ಎಂದು ಪರಿಗಣಿಸಲಾಗುತ್ತದೆ. ಅಷ್ಟೇ ಅಲ್ಲ ಪ್ರೊಫೆಸರ್ ಹಸೀನಾ 'ಇದ್ದತ್'ನ ಅವಧಿಯ ನಂತರವೂ ಪರಿಹಾರಧನ ಅಪೇಕ್ಷಿಸುವುದು ಕಾನೂನು ಬಾಹಿರವೆಂದೇ ಅಭಿಪ್ರಾಯ ಪಡುತ್ತಾರೆ. ಇದ್ದತ್‌ನ ಅವಧಿಯ ನಂತರ ಮುಸ್ಲಿಂ ಮಹಿಳೆಯು ಅವಳ ನೆಂಟರು ಅಥವಾ ವರ್ಕ್‌ಬೋರ್ಡ್‌ನ ನೆರವು ಪಡೆಯಬೇಕು ಎಂದು ಸೂಚಿಸುತ್ತಾರೆ. ಆದ್ದರಿಂದ ಹಷಿಯಾ ಅವರು ಸೂಚಿಸುವ ಎಲ್ಲಾ ಪರಿಹಾರಗಳು ಶರೀರತ್‌ನ ವ್ಯಾಪ್ತಿಗೊಳಪಡಬೇಕು ಎಂಬುದೇ ಆಗಿದೆ.

ಇಂದು ಮುಸ್ಲಿಂ ಮಹಿಳೆಯರಿಗೆ ನಿರ್ವಹಣೆ ಪರಿಹಾರವನ್ನು ಕೊಡಬೇಕೆನ್ನುವ ನೀತಿ ಎಲ್ಲ ರಾಜಕೀಯ ಹಿತಾಸಕ್ತಿಗಳನ್ನು ಮೀರಿ ನಿಲ್ಲಬೇಕಾಗಿದೆ. ಕಾನೂನು ರೂಪಿಸುವಾಗ ಯಾವುದೇ ಒಂದು ಸಮುದಾಯವೂ ತಾರತಮ್ಯ ನೀತಿಗೆ ಒಳಪಡದಂತೆ ಜಾರಿಯಾಗಬೇಕಾದಂತಹ ಸಮಸ್ಯೆಯನ್ನು ನೋಡಿದಾಗ ಆ ಮತೀಯ ಕಾನೂನಿಗೆ ಗೌರವಕೊಡಬೇಕೆಂಬ ಅಂಶವೊಂದನ್ನು ಬಿಟ್ಟು ಬೇರೆ ಯಾವುದೇ ಮಾನವೀಯ ಅಂಶಗಳಿಗೂ ಬೆಲೆಕೊಟ್ಟಂತೆ ಕಾಣುವುದಿಲ್ಲ. ಇಂತಹ ವಿಷಯಗಳನ್ನು ನಿರ್ವಹಿಸುವಾಗ ಸರ್ಕಾರವು ಅಲ್ಪಸಂಖ್ಯಾತರ ಹಿತಾಸಕ್ತಿಗಳನ್ನು ಗಮನಿಸಿದಂತೆ ಕಾಣುವುದಿಲ್ಲ.

– ಟಿ.ಕೆ. ರಾಜಲಕ್ಷ್ಮಿ

ಕೃಪೆ : Front Line

★ ★ ★

# ಮಹಿಳೆಯ ದಿನಾಚರಣೆ ಮತ್ತು ಲಕ್ಷಮ್ಮ

ನಮ್ಮ ಮನೆ ಕೆಲಸದ ಲಕ್ಷಮ್ಮ ಕೇಳ್ತಾನೇ ಇದ್ದಳು. ''ನೀನು ಆ ಊರು, ಈ ಊರು, ಅಲ್ಲಿ-ಇಲ್ಲಿ ಹೋಗ್ತಾನೆ ಇರ್ತಿ, ನನ್ನನ್ನು ಕರೆದುಕೊಂಡು ಹೋಗು'' ಅಂತ. ಮದುವೆ, ಹುಟ್ಟಿದ ಹಬ್ಬ, ಆರತಿ-ಅಕ್ಷತೆ-ಇಂತಹ ಸಮಾರಂಭಗಳಿಗಾದ್ರೆ ಅವಳನ್ನು ಜೊತೆಗೆ ಬಾ ಅನ್ನ ಬಹುದಿತ್ತು. ಆದರೆ ನನ್ನ ಹಾಜರಿ ಇರುತ್ತಿದ್ದ ಸಮಾರಂಭಗಳು ವಿಚಾರಧಾರೆ, ಚರ್ಚೆ, ಭಾಷಣ ಇಂತಹ ಅವಳಿಗೆ ಬೇಡದ - ಬೇಸರದ ಪರಿಕರಗಳಿಂದ ತುಂಬಿರುತಿದ್ದವು. ಅವಳನ್ನು ಕರೆದೊಯ್ಯುವ ಒಂದು ಸಂದರ್ಭ ಅಂತೂ ಸಿಕ್ಕಿತು. ಅದೇ ''ಮಹಿಳಾ ದಿನಾಚರಣೆ''. ಸಂಭ್ರಮದಿಂದಲೇ ನನ್ನ ಜೊತೆ ಬಂದಳು. ವೇದಿಕೆಯ ಮೇಲೆ ನಡೆಯುತಿದ್ದ ಭಾಷಣ, ಮಾತುಗಳನ್ನು, ವೇದಿಕೆಯ ಮುಂದಿನ ಸಾಲಿನ ಕುರ್ಚಿಯೊಂದರಲ್ಲಿ ಕುಳಿತು, ಬಹಳ ತಲ್ಲೀನಳಾಗಿ ಕೇಳುತ್ತಿದ್ದಳು.

ವೇದಿಕೆಯ ಮೇಲಿದ್ದ ಮಹಿಳೆಯೊಬ್ಬರು, ನೆರೆದಿರುವ ಮಹಿಳೆಯರಲ್ಲಿ ಯಾರೂ ಬೇಕಾದರೂ ಇಲ್ಲಿ ಮಾತನಾಡಬಹುದೆಂದು ಕರೆಯಿತ್ತರು. ಯಾರ್‍ಯಾರ ಅನುಭವ ಹೇಗೆಂದು ತಿಳಿಯುವ ಕುತೂಹಲ, ಉದ್ದೇಶದಿಂದ. ತಕ್ಷಣ ಎದ್ದು ವೇದಿಕೆಯ ಕಡೆಗೆ ನಡೆದೇ ಬಿಟ್ಟಳು ಲಕ್ಷಮ್ಮ. ನಾನಂತು ಕಕ್ಕಾಬಿಕ್ಕಿಯಾಗಿ ನೋಡುತ್ತಲೇ ಇದ್ದೆ. ಅವಳನ್ನು ಸರಿಯಾಗಿ ಮೈಕ್ ಮುಂದೆ ನಿಲ್ಲಿಸಿದರು. 'ಇಲ್ಲಾ ನಾನು ಕುಂತ್ಕೋತೀನಿ' ಅಂದವಳೇ ವೇದಿಕೆಯ ಮುಂಭಾಗದಲ್ಲಿ ಕೂತೇ ಬಿಟ್ಟಳು ಜೋರಾಗಿ ಅಳಲು ಶುರು ಮಾಡಿದಳು. ಇದೇನೆಂದು ಎಲ್ಲರೂ ದಿಗ್ಭ್ರಮೆಯಾದದನ್ನು ಕಂಡವಳೇ ''ಗಾಬ್ರಿಯಾಗಬೇಡ್ರವ್ವಾ, ಏನೋ ಅಳೇದೆಲ್ಲಾ ನೆಪ್ಪಾತು, ಅತ್ಬಿಟ್ಬೆ ಅಷ್ಟೆ'' ಎಂದು ಹಸನ್ಮುಖಿಯಾದಳು. ಪುನಃ ಎದ್ದು ನಿಂತಳು.

ನಾನು ಅಳ್ಳೀ ಮುಕ್ಕ ಮಾತನಾಡೋಕೆ ಬರಾಕಿಲ್ಲ ಸುಖ-ದುಃಖ ಏಳ್ಕೊಬೋದು ಅಂದ್ರು ನನ್ದಾ ಏಳ್ತೀನಿ ಕೇಳಿ.

ನಾನು ದೊಡ್ಡೋಳಾಗೋಕೆ ಮುಂದಾಗೇನೇ ಲಗ್ನ ಮಾಡಿದ್ರು. ನನ್ನ ಯಜಮಾನ ಸರಕಾರಿ ಕೆಲಸದಲ್ಲಿದ್ದ. ಅದೇ ಎಲೆಕ್ಟ್ರಿಕಲ್ ಬೋರ್ಡಿನಲ್ಲಿ. ನನಗೆ 8 ಮಕ್ಕಳಾದವು. ಅದರಲ್ಲಿ ಎರಡು ಅವಳಿ-ಜವಳಿ ಮಕ್ಕಳು ಮಗೂನಾಗೇ ಸತ್ತೋದ್ವು. ಆದ್ರೆ ತಿರಗಾ ಹುಟ್ಟಿದ್ವಲ್ಲಾ, ಅದೇ ನನ್ನ ಭಾಗ್ಯ ಮತ್ತು ನರಸಿಂಹ.

ಆರನೇ ಮಗಾವಿನ ಬಾಣಂತಿ ನಾನು, ಸ್ವಲ್ಪ ಸನ್ನಿ ಆಗಿತ್ತು. ಆ ನನ್ಮಗನಿಗೆ ಏನು ಜ್ಞಾನ ಬಂತೋ ನನ್ನನ್ನ ಉಚ್ಚಾಸ್ಪತ್ರೆಗೆ ಸೇರಿಸಿಟ್ಟು, ಮತ್ತೊಂದು ಎಣ್ಣನ್ನು ಲಗನ ಆಗಿ ಕರ್ಕೊಂಡು ಬಂದಿಟ್ಟ. ಇದಕ್ಕೆ ಆ ನಮ್ಮ ಅಪ್ಪನೂ ಶರೀಕಾಗಿದ್ದ ಬಿಡಿ. ಊಂ-ಉಚ್ಚಾಸ್ಪತ್ರೆಯವರಿಗೇನು ಉಚ್ಚೆ, ನನ್ನನ್ನ ಅಲ್ಲಿ ಮಡಕ್ಕೋಳಕ್ಕೆ, ಅಲ್ಲಿಂದ ಕಳಿಸ್ಬಿಟ್ರು. ಮನೆಗೆ ಬಂದೆ ನೋಡಿದೆ. ಎರಡನೆಯವಳ ಜೊತೆ ಇವನ ಚಕ್ಕಂದಾನಾ. ಆರು ಮಕ್ಕಳ ತಂದೆ ಇವನ್ಗಾಕಲಾ ಬೇಕಿತ್ತು ಇದೆಲ್ಲಾ ಅನ್ನಿಸ್ತು, 'ಥೂ' ಅಂತ ಕ್ಯಾಕರಿಸಿ ಉಗಿದು, ಅಲ್ಲಿಂದ ಪೊಂಟು ಬಂದ್ಬಿಟ್ಟೆ.

ಅವನ ಮನೆ ತಾವೇನೇ, ನನಗೆ ನನ್ನ ತೌರು ಮನೆಯವರು ಕೊಟ್ಟ ಎಂಚಿನ ಸಣ್ಣ ಗುಡ್ಲಿತ್ತು ; ಅಲ್ಲಿಗೆ ಆ ನನ್ನ ಕೋನೀ ಮಗೀನ, ಅದೇ ನರಸಿಂಹನ್ನ ಕರ್ಕೊಂಡು ಬಂದ್ಬಿಟ್ಟೆ. ಲಾಗಾಯ್ತು ಅವನ ಮನೀಗೆ ನಾ ಓಗಿಲ್ಲ. ಇನ್ನೊಂದು ತಮಾಷೆ ಕೇಳಿ. ಮಕ್ಕಳು ಯಾರೂ ನನ್ನ ಕಡೆ ಇಲ್ಲ. ಎಲ್ಲಾ ಅಪ್ಪನೊಂದಿಗೆ ಇವೆ. ನಾರಾಯಣ, ಗಿರೀಶ, ನರಸಿಂಹ, ಉಂ - ಮೂರು ಗಂಡು ಮಕ್ಕಳು. ಜಯ, ಸರಸಿ, ಭಾಗ್ಯ, ಮೂರು ಎಣ್ಮಕ್ಕಳು, ಎಲ್ಲಾ ದೊಡ್ಡೋರಾಗಿ, ಸಂಸಾರ ಮಾಡಿ ಕೊಂಡವ್ರೆ.

ಮುಂಚೆ-ಮುಂಚೆ ಆ ನನ್ನ ಸರ್ಕಾರ (ಲಕ್ಷಮ್ಮ ತನ್ನ ಗಂಡನ್ನ 'ಸರ್ಕಾರ' ಅಂತಾನೇ ಹೇಳೋದು) ಏನು ಮಾಡ್ತಿತ್ತು ಗೊತ್ತಾ? ''ಎಂಗವ್ವೆ, ಜೀವನಕ್ಕೆ ಏನ್ ಮಾಡ್ತಿರಬೋದು, ಯಾವನ್ನಾದ್ರಾ ಮಡಗಿ ಕೊಂಡವ್ಳಾ ಎಂಗೆ?'' ಅಂತ ಹೊಂಚಾಕಿ ನೋಡ್ತಿತ್ತು. ''ಇದೆಲ್ಲಾ ಚೆಂದಾಕಿಲ್ಲ. ನಮ್ಮೊಟ್ಟಿಗೆ ಇರು ಬಾ, ಜನವೇನೆಂದಾರು?'' ಅಂತೆಲ್ಲಾ ಆವಯ್ಯ ನನ್ನ ಪುಸಲಾಯಿಸ್ತು, ಹೆದರಿಸ್ತು. ''ನೀ ಏನಾರಾ ಮಾಡ್ಕೋದು, ನನ್ನ ಮ್ಯಾಕೆ ಗುಮಾನೀನ ನಿಂಗೆ, ನಾ ಏನಾರಾಮಾಡ್ತೀನಿ, ನಿಂಗ್ಯಾಕೆಲೆ ನನ್ನ ಸುದ್ದಿ, ನಾ ಬರಾಕಿಲ್ಲ ಓಗಂತ, ಸಾಗಹಾಕ್ದೆ. ಅಲ್ಲಾ ಕಣ್ರವ್ವ ಅವನಂತು ಎರಡನೇ ಲಗ್ನ ಮಾಡ್ಕೊಂಡ. ಅಂಗಂತ ನಾನೂನುವ ಎರಡನೆಯವನ್ನ ಮಡಗಿಕೊಂಡ್ರೆ, ಮುಂದೆ ನನ್ನ ಮಕ್ಕಳು ಉಗ್ಯಾಕ್ಕಿಲ್ವಾ, ಸರಿ ತಪ್ಪು ಅನ್ನೋ ದ್ನಾನ ಎಣ್ಣಾಗಿ ಉಟ್ಟಿರುವ ನನಗಿಲ್ವ, ಅಂತೆಲ್ಲಾ ಆಗೆಲ್ಲಾ ನಾನು ಯೋಚಿಸ್ದೆ ಕಣ್ರವ್ವ. ಬೆಳಗಾನಾ ಸೊಪ್ಪು ಮಾರ್ತೀನಿ, ನಾಕಾರು ಮನೆ ಕೆಲಸ ಮಾಡ್ತೀವ್ನಿ, ಸರ್ಕಾರಾನೂ ಕೇಳ್ತೀನಿ. ನನ್ನ ಜೀವನಕ್ಕಾಗುವಷ್ಟು ರಾಗಿ-ದುಡ್ಡು ಮಡಗು ಅಂತ. ಮನೆತಾವ ಓಗಿ ಜಗಳ ಮಾಡ್ತೀನಿ. ಇರೇರ ಅತ್ತಿರ ಪಂಚಾಯಿತಿ ಮಾಡಿಸಿವ್ನಿ, ಇಂಗೈತೆ ಕಣ್ರವ್ವಾ ನನ್ನ ಬದುಕು. ಅಲ್ಲ ಕಣ್ರವ್ವಾ ಎರಡನೇಯವಳನ್ನು ಕರ್ಕೊಂಡು ಬಂತಲ್ಲಾ ಆ ನನ್ನ ಸರ್ಕಾರ, ಆ ನನ್ನ ಮಗ ಬಾಳಿಸಿದ್ನಾ ಕೇಳಿ, ತಾನೂ ಕುಡೀತಾನೆ, ಅವಳಿಗೂ ಚೆನ್ನಾಗಿ ಕುಡಿಯೋದನ್ನ ಕಲಿಸ್ಬುಟ್ಟಿದ್ದಾನೆ, ಅವಳ್ನ ಕುಣಿಸ್ತಾನೆ. ಆ ಮನೆ ಆಳ್ ನನ್ಮಗ.

ಆವಯ್ಯ ಏನು ಘಾಟಿ ಇದಾನೇಂತೀರಿ. ಅಳ್ಳೀಲಿ ನನ್ನ ಎಸ್ರಲ್ಲಿ ಹೊಲಐತೆ, ನಾನು ಓಗಿ, ರಾಗಿ ತರೋವಾಂತ ಹಳ್ಳಿಗೆ ಇಲ್ಲಿಂದ ದುಡ್ಡು ಆಕ್ಕೊಂಡು ಉಸ್ಸಪ್ಪಾಂತ ಓದ್ರೆ, ಅದಕ್ಕೆ ಮುಂಚೆ ತಾನೇ ಓಗಿ ತಂದ್ಬಿಡ್ತಾನೆ. ಏನಾರ ಕೇಳಿ, ಆ ನನ್ನ ಮಗಂದು ಒಂದೇ ಉತ್ತರ ''ನಮ್ಮೊಂದಿಗೇ ಇರು ಬಾ'' ಅಂತ. ಎರಡನೆಯವಳಿಗೂ ನಾಲ್ಕು ಮಕ್ಕಳಿವೆ. ಅಬ್ಬಾ ಕೊಳಕೂಂದ್ರೆ, ಕೊಳಕು ಕಣ್ರವ್ವಾ.

ಆ ಸರ್ಕಾರ, ಆ ನನ್ನ ಮಕ್ಕಳು ಏನೇನು ಇಂಸೆ ಕೊಡ್ತವೆ ಗೊತ್ತಾ? ಮನೆ ಬಾಗಿಲು ಸರಿ ಇಲ್ಲ, ಬೀಗಾನೇ ಒಡೆದು, ನಾನು ಮಡಗಿರ್‍ತೀನಲ್ಲಾ, ದುಡ್ಡು, ರಾಗಿ, ಎಲ್ಲಾ ಎತ್ತಿಡತ್ವೆ. ನನ್ನ ಸ್ವಂತ ಗಂಡ - ಮಕ್ಕಳೇ, ಇನ್ಯಾರೂ ಅಲ್ಲರವ್ವಾ ದುಡಿದು ತಂದದನ್ನ ಇಂಗೆ ಕಳ್ತನ ಮಾಡಿದ್ರೆ ನಾನೇನು ಮಾಡಲವ್ವಾ, ನೀವೇ ಹೇಳಿ. ಪೋಲಿಸಪ್ಪಂಗೆ ಏಳೋವಾಂದ್ರೆ ಆ ನನ್ನ ಮಗನೂ ಗಂಡ್ಸೇ, ಎಲ್ಲಾರೂ ಒಂದೇ ತೊಗೋಳಿ.

ಇಗ ದೀಪಾನೂ ಇಲ್ಲ. ಕಟ್ ಮಾಡಿಸ್ಬಿಟವ್ರೆ, ಸೀಮೆಯೆಣ್ಣೆ ತರೋವಾಂದ್ರೆ. ಲೀಟರ್‌ಗೆ 18-20 ರೂಪಾಯಿ ಏಳ್ತಾರೆ. ನಂಗೂ ವಯಸಾಯ್ತು ಕಣ್ರವ್ವಾ. ಕಣ್ಣೂ ಸರಿಯಾಗಿ ಕಾಣೋಕಿಲ್ಲ. ರಾತ್ರಿ ಅಂತು ಬೋ ತೊಂದ್ರೆ, ದೀಪ ಇಲ್ದೆ. ಇದನ್ನೆಲ್ಲಾ ಕೇಳವಾಂತ ಮೊನ್ನೆ ಸರ್ಕಾರ ತಾವ ಓಗಿದ್ದೆ. ಒಳಗೋಗಿ ನೋಡ್ತೀವ್ನಿ. ಆ ನನ್ನ ಸೆವತಿ. ಕಂಠಪೂರ್ತಿ ಕುಡಿದು. ವಾಂತಿ ಮಾಡಿಕೊಂಡು. ಮೈಮೇಲೆ ಸುದ್ದಿ ಇಲ್ಲದೆ ಬಿದ್ದಳ್ಳೆ. ಈವಯ್ಯ ಬೈಯ್ತಾ ಅವ್ನೆ. ನನಗ್ಯಾಕೊ ರೇಗೋಯ್ತು. ಅವನ್ನ ಬೈದು ಆಚೆ ಕಳಿಸ್ದೆ. ಪಾಪ ಅದೂ ನನ್ನಾಗೆ ಹೆಣ್ಣಲ್ವಾ? ನೀವೇ ಹೇಳಿ (ತನ್ನ ಸವತಿಯಾದರೂ, ತನಗೆಷ್ಟೇ ಕಷ್ಟವಾದರೂ ಆ ಹೆಣ್ಣಿಗಾಗಿ, ಹೃದಯದಿಂದ ಬಂದ ಅವಳ ನುಡಿಗಳು ಅಲ್ಲಿದ್ದವರನ್ನು ಕಲಕಿದವು). ಇಷ್ಟಕ್ಕೂ ಆ ಗಂಡಸೇ ಕಾರಣತಾನೇ, ಸರಿ. ಆ ಗಲೀಜೆಲ್ಲಾ ತೊಳೆದು ಬಳಿದು, ಮನೇನೆಲ್ಲಾ ಗುಡಿಸಿ, ಒರಸಿ, ವಪ್ಪಮಾಡಿ, ಸುದ್ದಮಾಡಿ, ಒಂದಿಷ್ಟು ರಾಗಿ ಮುದ್ದೆ, ಸೊಪ್ಪಿನ ಸಾರು ಮಾಡಿ ಬಂದೆ. ಆದ್ರೆ ನಾನೇನು ಆಲ್ಲಿ ಉಣ್ಣಲಿಲ್ಲ, ಯಾವತ್ತೂ ಉಣ್ಣಾಕಿಲ್ಲ ಕಣ್ರವ್ವಾ. ಹೇಸಿಗೆ ಆಗ್ತದೆ ನನಗೆ.

ಆ ನನ್ನ ಸರ್ಕಾರಕ್ಕೆ ಪಿಂಚಣಿ ಆಯ್ತು ಓದ ವರ್ಸ. ಆ ಪಿಂಚಣಿ ಆಮ್ಯಾಕೆ ನಂಗೆ ಬತ್ತದಂತೆ. ಆ ನನ್ನ ಮಗಳು ಭಾಗ್ಯ ಹೇಳಿದಳು. ''ಅಯ್ಯೋ ಬಿಡ್ರವ್ವಾ ಆ ದುಡ್ಡಿಗೆ ನಾನೇನ ಬಾಯ್ಬಿಟ್ಕೊಂಡು ಕುಂತೀವ್ನಾ? ಆರು ಮಕ್ಕಳಲ್ಲಿ ಯಾರ್‍ಯಾರ ನನ್ನ ಬಾಯಿಗೆ ನೀರು ಬುಡ್ತಾರೆ. ಅದಿರಲಿ ಬುಡಿ ಆ ಮಾತ್ನ. ಹುಂ, ನಿಮ್ಮುಂದೆ ಅತ್ಬಿಟ್ನಲ್ಲಾ, ಅಂಗೆ ನಾನು ಯಾವತ್ತೂ ಅಳಾಕಿಲ್ಲ. ಬೇಕಾರೆ ಅಮ್ಮೋರ್‍ನ ಕೇಳಿ (ನನ್ನ ಕಡೆ ಕೈತೋರಿಸಿದಳು) ಇಲ್ಲಿ ಅತ್ಬಿಟ್ಟೆ ಯಾಕಂತೀರಾ? ನಮ್ಮ ಅಳ್ಳೀಲಿ ನಾಟಕ ನೋಡಿದ್ನಲ್ಲಾ ಅಂಗೆ ಶುರುಮಾಡೋವಾಂತ ಸ್ವಲ್ಪ ಅತ್ತು ನಾಟಕ ಆಡಿದೆ ಅಷ್ಟೆ. ಆದರೆ ನಾ ಏಳಿದ್ದೆಲ್ಲಾ ನಾಟಕ ಅಲ್ಲ ಕಣ್ರವ್ವಾ. ನಾನ್ಯಾಕೆ ಅಳ್ಲಿ, ನಾನೇನ ಮಾಡಿವ್ನಿ. ಆ ಸರ್ಕಾರ ಅಳ್ಲಿ ಮುಂದೆ ಇದೆ ಆವಯ್ಯಂಗೆ ನೋಡಿ ಬೇಕಾದ್ರೆ.

ಇಗಾ ಇನ್ನೂ ಕೇಳಿ. ಆ ನನ್ನ ಮಗಳು ಜಯಾ ಇದಾಳಲ್ಲ, ಅವಳಿಗೆ ಎಲ್ಡು ಮಕ್ಕಳು ಗಂಡಾನೂ ಒಳ್ಳೇವ್ನೆ. ಏನ್ ಮಾಡೌವ್ಳೆ ಗೊತ್ತಾ, ಆ ಗಂಡನ್ನ ಬುಟ್ಬು ಬುಟ್ಟು, ಗಂಡನ ಸ್ನೇಯಿತಾನಂತೆ ಅವನ್ಜೊತೆ ಓಡಿ ಬಂದವ್ಳೆ. ಇಲ್ಲೇ ನಮ್ಮನೇ ತಾವೇ ಇದಾಳೆ. ತಾನು ದುಡಿದು ಅವನಿಗೂ ಉಣಾಕೆ ಆಕ್ತಾಳೆ. ಅವಳಿಗೆಷ್ಟು ಉಗೀತೀನಿ ಗೊತ್ತಾ? ಅವಳಿಗೇನು ನಾಚಿಕೆ ಐತಾ? ಆ ಎರಡನೆಯವನನ್ನು ಕಟ್ಕೊಂಡು ನನ್ನ ಮನೆಗೆ ಬರ್‍ತಾಳೆ. ನಾನು ಸೇರಿಸ್ತೀನಾ. ನೀವೇ ಏಳಿ. ಮುಖಕ್ಕೆ ಬಾಗಿಲನ್ನ ಆಕ್ಬಿಡ್ತೀನಿ. ಆ ಮೊದಲನೇ ಗಂಡಾನೂ ಅವಳ ಹತ್ತಿರ ಬರ್‍ತಿರ್‍ತಾನೆ. ಥೂ, ಅವಳದೊಂದು ಬದುಕಾ? ಇಷ್ಟಾದ್ರು ಉಡೋಕೆ-ತೊಡೋಕೆನೂ ಇಲ್ಲ ಒಟ್ಟೆ ತುಂಬಾ ಊಟಾನೂ ಇಲ್ಲ. ಬುಡಿ, ಅಪ್ಪನ ಬುದ್ದೀನೇ ಅವಳ್ದೂನೂವೇ. ಇದೆಲ್ಲಾ ನನಗೆ ಸರೀ ಬರೋಕಿಲ್ಲ ಕಣ್ರವ್ವಾ.

''ನೀನು ಓದಿಲ್ಲ ಅದಕ್ಕೆ ನಿಂಗೆ ಇಂಗಾಯ್ತು'' ಅಂತ ನಮ್ಮಂಥೋರ್‍ನ ಕಂಡ್ರೆ, ನಿಮ್ಮಂಥೋರು ಏಳ್ತಾರಲ್ಲಾ, ಅಂಗಾರಾ ನಾನೊಂದು ಮಾತ್ತ ಕೇಳ್ತೀವ್ನಿ. ಜಿನಾ (ದಿನಾ) ಅದೇಟು ಹೆಣ್ಮಕ್ಕಳು ಸೀಮೆಯೆಣ್ಣೆ ಸುರ್‍ಕೊಂಡು ಬೆಂಕಿ ಇಕ್ಕೊಂಡು ಸಾಯ್ತಾರಲ್ಲಾ, ಓದಿರೋದು ಯಾಕಂಗೆ ಮಾಡ್ಬೇಕು? ಅಲ್ವರಾ?

ನಮ್ಮಲ್ಲಿ ಅಂಗಿಲ್ಲ ಕಣ್ರವ್ವಾ ನಾಕು ಮನೆ ಕೆಲಸ ಮಾಡ್ತೀವಿ, ಮಕ್ಕಳನ್ನ ಇಸ್ಕೂಲೆಗೆ ಒಯ್ತೀವಿ, ಕರ್‍ಕೊಂಡು ಬರ್‍ತೀವಿ. ಮನೆ ಮನೆಗೂ ಪಾಕೆಟ್ ಆಲ್ನ ಕೊಡ್ತೀವಿ, ಏನಾರ ಮಾಡಿ ಜೀವನ ನಡೆಸ್ತೀವಿ. ನಮ್ಮ ಮಕ್ಕಳನ್ನೂ ನೋಡ್ತೀವಿ ಓದಿಸ್ತೀವಿ.

ಯಾರೂ, ಎಂಗೆಂಗೋ ಏನಾರ ಮಾಡ್ಕೊಂಡು ಸಾಯಬೇಡಿ ಕನ್ರವ್ವಾ. ಯಾರುನೂವಾ ಅಳ್ತಾ ಕುಂತ್ಕೊ ಬೇಡಿ. ನೀವು ಓದಿರೋರು. ನಮ್ಮೋರಿಗಿಂತ ಚೆಂದಾಗಿ ಬಾಳಬೋದು. ನಮ್ದೇ ನಮ್ಗೆ ಎಚ್ಚು ಅಂತ ಅಂದ್ಕೊಳ್ಳೋದು ಬ್ಯಾಡಾ, ಕಷ್ಟ ಏನೇ ಬರಲಿ. ನಾಕೂ ಜನಕ್ಕೆ ಉಪಕಾರ ಮಾಡಿ. ಮಾನಮರ್‍ವಾದೆ ಇಂದ ಬದುಕಿ. ಸೈ ಅನಿಸ್ಕೊಂಡು, ಜೈ ಅಂತ ಓಗಿ ಬಿಡಬೇಕು ಕಣ್ರವ್ವಾ. ಎಲ್ರೂ, ಎಂಗಾರ ಚೆಂದಾಗಿರಿ ಅವ್ವ ''ಅಂದವಳೇ ಕಳಕಳೆಯಿಂದ ಇದ್ದ ಆ ನಮ್ಮ ಲಕ್ಷ್ಮಮ್ಮ ದಡದಡನೆ ವೇದಿಕೆ ಇಂದ ಇಳಿದು, ತನ್ನ ಮೊದಲಿನ ಸ್ಥಾನದಲ್ಲಿ ಕುಳಿತಳು.

- ಬಿ. ವಿ. ಸುಭದ್ರಾ

★ ★ ★

# ಓದಿನ ಬೆರಗು!

**(ನಾವು ಒಳ್ಳೆಯ ಪುಸ್ತಕಗಳನ್ನು ಓದಿದಾಗ ಅದರಲ್ಲಿನ ಕೆಲವು ಖುಷಿಯ ಹಾಗೂ ಇಷ್ಟವಾಗುವ ಅಂಶಗಳನ್ನು ಬೇರೆಯವರೊಂದಿಗೆ ಹಂಚಿಕೊಳ್ಳುವ ಇಚ್ಛೆಯಾಗುತ್ತಾದಲ್ಲವೆ? ಅದಕ್ಕೆಂದೇ ಈ ಅಂಕಣ. ಇದರಲ್ಲಿ ಈ ಬಾರಿ ಪ್ರೊ. ವೈ.ಆರ್. ಮೋಹನ್‌ರವರ 'ನೆನಪುಗಳು' ಕೃತಿಯಿಂದ ಆಯ್ದ ಎರಡು ಪ್ಯಾರಾಗಳಿವೆ. ಅಮೆರಿಕದಲ್ಲಿ ನೆಲೆಸಿರುವ 66ವಯಸ್ಸಿನ ಶ್ರೀ ಮೋಹನ್‌ರವರು 8-9 ವರ್ಷಗಳಿಂದ ಪಾರ್ಕಿನ್‌ಸನ್ ಎನ್ನುವ ಮದ್ದಿಲ್ಲದ ರೋಗಕ್ಕೆ ಗುರಿಯಾಗಿದ್ದಾರೆ. ಇದರ ಮುಖ್ಯ ಲಕ್ಷಣ ನರಗಳ ದೌರ್ಬಲ್ಯದಿಂದಾಗಿ ಸ್ಮರಣ ಶಕ್ತಿಯನ್ನು ಕಳೆದುಕೊಳ್ಳುವುದು. ನೆನಪುಗಳನ್ನು ಜೀವಂತವಾಗಿಟ್ಟುಕೊಳ್ಳುವ ಪ್ರಯತ್ನ, ಮೋಹನ್‌ರವರು ತಾವು ಕಳೆದ ಬಾಲ್ಯ ಮತ್ತು ಇತರ ಅನುಭವಗಳನ್ನು ದಾಖಲಿಸಿರುವುದು ತಮ್ಮ 'ನೆನಪುಗಳು' ಕೃತಿಯಲ್ಲಿ. ಆಪ್ತವಾಗಿ ಹೇಳುವ ಶೈಲಿಯುಳ್ಳ ಶ್ರೀ ಮೋಹನ್‌ರ ಬರವಣಿಗೆ ಚಿಂದವಾಗಿ ಓದಿಸಿಕೊಂಡು ಹೋಗುತ್ತದೆ)**

(1) ಪುಟ 79. (ಶಿವಮೊಗ್ಗೆಯ ಸ್ಕೂಲಿನಲ್ಲಿ ಚರಿತ್ರೆ ಪಾಠ ಮಾಡುತ್ತಿದ್ದ ಉತ್ತರ ಕರ್ನಾಟಕದ ಮೇಷ್ಟ್ರ ಮಾತುಗಳು. ಕಾಲ ಸು. 1947-48) ''ಜಹಂಗೀರು ಸತ್ತ ಮೇಲೆ ಷಹಜಹಾನ್ ಪಟ್ಟಕ್ಕೆ ಬಂದ ಕಣ್ರಲೆ. ಹೊಟ್ಲನವ್ರು ಇವ್ನ ಹೆಸರ್ನ ಯಾಕೆ ಯಾವ ತಿಂಡಿಗೂ ಇಡ್ಲಿಲ್ಲ ಅಂತ ಯೋಚ್ನೆ ಆಕ್ಕೈತಿ. ಷಹಜಹಾನ್‌ನ ಹೆಸ್ರು ಉಳಿದಿರೋದು ತಾಜಮಹಲ್ ಕಟ್ಟಡದಿಂದ ಕಣ್ರಲೇ. ತಾಜಮಹಲು ಯಾಕೆ ಕಟ್ಟಿಸಿದಾ ಅಂತ ಕೇಳಿದ್ರೆ ಹೆಣ್ತಿ ಮ್ಯಾಲಿನ ಪ್ರೀತಿಗಾಗಿ ಕಟ್ಟಿಸ್ದ ಅಂತ ರಂಗುರಂಗಿನ ಕಥಿ ಹೇಳ್ತಾರೆ ನಾಟಕದೋರು, ಸಿನಿಮಾದೋರು ಪ್ರೀತಿ ಪ್ರೇಮ ಲೊಂಗು ಲೊಸ್ಕು ಅಂತ ಕತೆಕಟ್ಟಿ ತೋರ್‍ಸಿ ಚೆನ್ನಾಗಿ ದುಡ್ಡು ಮಾಡ್ಕೊಂಡ್ರು. ನಿಜ ಹೇಳ್ತೀನಿ ಕೇಳ್ರಲೇ. ಈ ಷಹಜಹಾನನಿಗೆ ಬೇಕಾದಷ್ಟು ಬೀವಿಗಳಿದ್ರು. ಹೆಸ್ರಿಗೆ ಅಷ್ಟು ಜೀವಿಗಳಿದ್ರೂ ತೆಳ್ಳಗೆ ಬೆಳ್ಳಗೆ ಬಳ್ಳಿಹಾಂಗ ಇದ್ದವರ್ ಇರಲಿಲ್ಲಾ... ಹೀಂಗಿರಬೇಕಾದ್ರೆ ಹತ್ತೊಂಬತ್ತು ವರ್ಷದ ಹರೇದ ಹುಡ್ಗಿ ಮಮ್ತಾಜಳನ್ನ ಈ ಇಳಿವಯಸ್ಸಿನ ಷಹಜಹಾನ ನಿಖಾಮಾಡ್ಕೊಂಡ. ಅವಳು ಚೆಂದೊಳ್ಳಿ ಹೆಣ್ಣು. ಪಾಪ, ಆಕಿಗೆ ಈ ಮುದಕ ಪುರಸೊತ್ತು ಕೊಡ್ದೆ ಗೋಳಾಡಿಸಿದ. ಆಕೀಗೂ ಪಾಪ ಒಂದಾದ್ಮೆಲೆ ಒಂದು ಹದಿನಾಲ್ಕು ಮಕ್ಕಳನ್ನ ಹೆತ್ತಳು. ಹದಿನಾಲ್ಕನೇ ಕೂಸಿನ ಹೆರಿಗೀಲಿ ಆಕಿ ಸತ್ತಾಗ ಆಕಿಗೆ ವಯಸ್ಸು ಮೂವತ್ತೊಂಬತ್ತು. ಆಕಿ ನಿಖಾ ಆಗಿ ಇಪ್ಪತ್ ವರ್ಷ ಕೂಡಾ ಕಳಿದಿರಲಿಲ್ಲ. ಮಕ್ಕಳ್ನ ಹೆತ್ತು ಹೆತ್ತು ಸುಸ್ತಾಗಿ ಸತ್ಲು ಕಣ್ರಲೇ ನನ್ನ ಕೇಳಿದ್ರೆ, ಈ ಷಹಜಹಾನನೇ ಆಕೀನ ಕೊಂದದ್ದು. ಆಕೀನ ಕೊಂದು ಆಕೀ ಹೆಸ್ರಲ್ಲಿ ತಾಜಮಹಲ ಕಟ್ಟಿಸಿದ. ಆಕೀ ಇದ್ದಾಗ ಆರಾಂ ಕೂಡದೇ ಆಕೀ ಆರೋಗ್ಯ ಕೆಡ್ಸಿ ಸತ್ತ ಮ್ಯಾಲ ತಾಜಮಹಲ್ ಕಟ್ಸಿ ಏನ್ ಪ್ರಯೋಜ್ನ ಆತು ಹೇಳ್ರಪಾ. ಜನ ಏನಾರೆ ಹೇಳ್ಲಿ ನನಗನಕಾ ತಾಜ್‌ಮಹಲ್ ಚಿತ್ರ ನೋಡ್ದಾಗ್ಲೆಲ್ಲಾ ರಕ್ತ ಇಲ್ಲೆ ಬೆಳ್ಳಗೆ ಬಿಳಿಚಿ ಕೊಂಡಿರೋ ಬಾಣಂತಿ ಮುಖ ಕಾಣ್ತೈತಿ. ಆಕೀನ ಕಾಮಕ್ಕೆ ಬಲಿ ಕೊಟ್ಟು ಪ್ರೇಮಕ್ಕೆ ಗೋರಿ ಕಟ್ಟಿಸಿದ. ಬೆಪ್ತಕ್‌ಡಿ ಜನ ತಾಜ್‌ಮಹಲ್ ನೋಡ್ಕೊಂಡು ಬಂದು ಷಹಜಹಾನ್ ಮಮ್ತಾಜ್‌ರದು ಎಂಥಾ ಪ್ರೇಮ ಅಂತಾ ಹಲ್ಲಿ ಲೊಚಗುಟ್ಟಾರಿಗೆ ಲೊಚಗುಟ್ತಾರೆ ನೋಡ್ರೆಪಾ''.

★ ★ ★ ★ ★

(2) ಪುಟ 268ರಿಂದ 270. ''ನನಗೆ ಬಹಳ ಹತ್ತಿರದ ಸ್ನೇಹಿತನಾಗಿದ್ದ ನನ್ನ ಮುಸ್ಲಿಂ ಗೆಳೆಯ ಈಗ ನನ್ನನ್ನು ಮಾತನಾಡಿಸುವುದೇ ಇಲ್ಲ. ಕಾರಣವೇನುಗೊತ್ತೆ? ಅಸಹಾಯಕಳಾಗಿದ್ದ ಅವನ ಹೆಂಡತಿ ಪರ ನಾನು ವಹಿಸಿದ್ದಕ್ಕಾಗಿ. ಈ ಗೆಳೆಯ ಅಮೆರಿಕನ್ ಹೆಂಗಳೆಯೊಬ್ಬಳ ಜೊತೆ ಸಲುಗೆಯಿಂದಿದ್ದ. ನಾವು ಇವ ಅವಳನ್ನೇ ಮದುವೆಯಾಗುತ್ತಾನೆ ಎಂದು ಕೊಂಡೆವು. ಆದರೆ ಹಾಗಾಗಲಿಲ್ಲ. ಭಾರತಕ್ಕೆ ಹೋಗಿ ಅಲ್ಲಿಯ ತಮ್ಮ ಜಾತಿಯ ಹುಡುಗಿಯನ್ನು ಮದುವೆಯಾಗಿ ಬಂದ. ಆ ಹುಡುಗಿಗೆ ಇಂಗ್ಲೀಷ್ ಅಷ್ಟಾಗಿ ಬರುತ್ತಿರಲಿಲ್ಲ. ತಾನು ಕೆಲಸಕ್ಕೆ ಹೋಗುವಾಗ ಅವಳನ್ನು ನಮ್ಮ ಮನೆಯಲ್ಲಿ ಬಿಟ್ಟು ಹೋಗುತ್ತಿದ್ದ. ಆ ಹುಡುಗಿಯೂ ಅಮೆರಿಕಕ್ಕೆ. ಇಂಗ್ಲೀಷಿಗೆ ಹೊಂದಿಕೊಳ್ಳತೊಡಗಿದಳು. ಕೆಲವೇ ದಿನ ನಮ್ಮ ಮುಸ್ಲಿಂ ಗೆಳೆಯನ ವರ್ತನೆಯೇ ಬದಲಾಯಿತು. ಹೆಂಡತಿಯನ್ನು ಇಂಡಿಯಾಗೆ ವಾಪಸ್ ಹೋಗು ಎಂದು

ಒತ್ತಾಯಿಸತೊಡಗಿದ. ಹುಡುಗಿ ಕಂಗಾಲಾದಳು. ನಾನು ಮತ್ತು ನನ್ನ ಡಾಕ್ಟರ್ ಸ್ನೇಹಿತರೊಬ್ಬರು ಈ ಮಿತ್ರನಿಗೆ ಬುದ್ಧಿ ಹೇಳಿದೆವು. ಆತನಿಗೆ ತನ್ನ ಹಳೆ ಅಮೆರಿಕನ್ ಪ್ರೇಯಸಿಯ ಸೆಳೆತ ಬಲವಾಗಿತ್ತು. ನಾವು "ನೀನು ಮಾಡುತ್ತಿರುವುದು ಅನ್ಯಾಯ. ನೀನೇ ಹೋಗಿ ಅವಳನ್ನು ಮದುವೆಯಾಗಿ ಕರೆತಂದು ಈಗ ಛಾರ್ಜ್ ಕೊಡುತ್ತೇನೆ ವಾಪಸ್ ಹೋಗು ಎಂದರೆ ಹೇಗೆ? ನಿನಗೆ ನಿಜವಾಗಿಯೂ ಅವಳು ಬೇಡವಿದ್ದರೆ ಡೈವೋರ್ಸ್ ತೆಗೆದುಕೊಂಡು ಅವಳ ಪಾಲಿಗೆ ಏನು ಕೊಡಬೇಕೋ ಕೊಟ್ಟು ಕಳಿಸು" ಎಂದೆವು. ಅವನು ನಮ್ಮ ಮಾತು ಕೇಳಲಿಲ್ಲ, ಹೆಂಡತಿಗೆ ಕಿರಿಕುಳ ಕೊಡಲಾರಂಭಿಸಿದ. ಅವಳ ಸ್ಥಿತಿ ಮರುಕ ಹುಟ್ಟಿಸುವಂತಾಯಿತು. ನಮ್ಮ ಡಾಕ್ಟರ್ ಮಿತ್ರರಿಗೆ ಮೂರು ಜನ ಕಾಲೇಜಿನಲ್ಲಿ ಓದುತ್ತಿರುವ ಹೆಣ್ಣು ಮಕ್ಕಳಿದ್ದರು. ಆ ದಂಪತಿಗಳು ಇವಳೂ ನಮ್ಮ ಮಗಳೇ ಎಂದು ತಮ್ಮ ಮನೆಯಲ್ಲಿ ಆ ಹುಡುಗಿಯನ್ನು ತಂದಿಟ್ಟುಕೊಂಡರು. ನನ್ನ ಮುಸ್ಲಿಂ ಮಿತ್ರ ತನ್ನ ಮನೆಗೆ ಮತ್ತೆ ಈ ಹೆಂಡತಿ ಬಾರದಂತೆ ಬೀಗಗಳನ್ನೆಲ್ಲಾ ಬದಲಾಯಿಸಿ ಬಿಟ್ಟ! ಇದ್ದಕ್ಕಿದ್ದಂತೆ ಅಪರಿಚಿತಳಾದ, ಪರಮತಸ್ಥಳಾದ ಈ ತರುಣಿಯ ಜವಾಬ್ದಾರಿ ನನ್ನ ಡಾಕ್ಟರ್ ಮಿತ್ರನ ಮೇಲೆ ಬಿದ್ದದ್ದು ನನಗೆ ಆತಂಕ ತಂದಿತು. ನಾವಿಬ್ಬರೂ ಕೂಡಿ ಮುಸ್ಲಿಂ ಸಂಘದ ಅಧ್ಯಕ್ಷರನ್ನು ಕಂಡು ವಿಚಾರಿಸಿದೆವು. ಅವರು ಜಾಣಾಕ್ಷತನದಿಂದ 'ಇದು ಕೋರ್ಟಿನಲ್ಲಿ ತೀರ್ಮಾನವಾಗಬೇಕಾದ ವಿಷಯ. ಅವಳಿಗೆ ಆಸರೆ ನೀಡಿ ಕೋರ್ಟಿಗೆ ಹಣ ಕಟ್ಟುವ ಸ್ಥಿತಿ ಈ ಸಂಘಕ್ಕಿಲ್ಲ' ಎಂದು ಬಿಟ್ಟರು. ಭಾರತ ಹಾಗೂ ಪಾಕೀಸ್ತಾನೀ ಕುಟುಂಬಗಳಲ್ಲೂ ವಿಚಾರಿಸಿದೆವು. ಅವರೂ 'ಇದು ಗಂಡ ಹೆಂಡಿರ ಖಾಸಗಿ ವಿಷಯ' ಎಂದು ಕೈಯಾಡಿಸಿಬಿಟ್ಟವು. ಡಾಕ್ಟರ್ ಪತ್ನಿ 'ನನ್ನ ಹೆಣ್ಣುಮಕ್ಕಳ ಜೊತೆ ಇವಳೂ ಒಬ್ಬಳು' ಎಂದರು. ಡಾಕ್ಟರ್ ತಮ್ಮ ಪರಿಚಿತ ವಕೀಲರಿಂದ ಕೇಸು ನಡೆಸಿದರು. ಒಂದು ವರ್ಷ ನಡೆದ ಕೇಸು ಕೊನೆಗೆ ಈ ತರುಣಿಯ ಪರವಾಗಿ ನಮ್ಮ ಮುಸ್ಲಿಂ ಸ್ನೇಹಿತ ಇವಳಿಗೆ ಸಾವಿರಾರು ಡಾಲರ್ ತೆರಬೇಕಾಗಿ ಬಂತು. ಡಾಕ್ಟರ್ ದಂಪತಿಗಳ ವಿಶಾಲ ಮನಸ್ಸನ್ನು ಎಷ್ಟು ಶ್ಲಾಘಿಸಿದರೂ ಸಾಲದು."

*- ಸಂಗ್ರಹ : ಶಾಂತಾನಾಗರಾಜ್*

★ ★ ★

## ಸಾರಾಯಿ ನಿಷೇಧಕ್ಕಾಗಿ ಬೀದಿಗಿಳಿದ ಮಹಿಳೆಯರು

ತಮ್ಮ ಗ್ರಾಮಗಳಲ್ಲಿ ಸಾರಾಯಿ ಮಾರಾಟವನ್ನು ನಿಷೇಧಿಸಬೇಕು ಎಂದು ಒತ್ತಾಯಿಸಿ ತುಮಕೂರು ತಾಲ್ಲೂಕು ದುರ್ಗದ ಹಳ್ಳಿ ಮತ್ತು ಸುತ್ತಮುತ್ತಲಿನ ಗ್ರಾಮಗಳ ಮಹಿಳೆಯರು ಇತ್ತೀಚೆಗೆ ತುಮಕೂರು ನಗರದಲ್ಲಿ ಪ್ರತಿಭಟನೆ ನಡೆಸಿದರು.

ದುರ್ಗದ ಹಳ್ಳಿಯ ಸ್ತ್ರೀಶಕ್ತಿ ಸ್ವಸಹಾಯಸಂಘದ ಪ್ರತಿನಿಧಿಗಳು ಹಾಗೂ ಇತರ ಗ್ರಾಮಗಳ ಮಹಿಳೆಯರು ಈ ಪ್ರತಿಭಟನೆಯಲ್ಲಿ ಪಾಲ್ಗೊಂಡಿದ್ದರು. ಈ ಗ್ರಾಮಗಳಲ್ಲಿ ಪರವಾನಗಿ ಪಡೆದ ಎರಡು ಸಾರಾಯಿ ಅಂಗಡಿಗಳಿವೆ. ಜೊತೆಗೆ ಪರವಾನಗಿ ಇಲ್ಲದೆ ಮನೆ ಮನೆಗಳಲ್ಲಿ ಅಕ್ರಮವಾಗಿ ಸಾರಾಯಿ ಸಂಗ್ರಹಿಸಿ ಮಾರಾಟ ಮಾಡಲಾಗುತ್ತಿದೆ. ತಮ್ಮ ಗಂಡಂದಿರು, ಮಕ್ಕಳು ಸಾರಾಯಿದಾಸರಾಗಿ ಹೆಂಡತಿ, ಮಕ್ಕಳನ್ನು ಕಡೆಗಾಣಿಸುತ್ತಿದ್ದಾರೆ. ಕುಡಿತಕ್ಕಾಗಿ ಹೆಂಡತಿಯರ ತಾಳಿ ಮಾರುವ ಪರಿಸ್ಥಿತಿ ಈ ಗ್ರಾಮಗಳಲ್ಲಿದೆ ಎಂದು ಮಹಿಳೆಯರು ಜಿಲ್ಲಾಧಿಕಾರಿಗಳಿಗೆ ಹೇಳಿದರು. ದುರ್ಗದ ಹಳ್ಳಿ, ತಿಮ್ಮನಾಯ್ಕನ ಹಳ್ಳಿ, ಹಳೇಕೋಟೆ, ಸೇಟುಪಾಳ್ಯದ ಮಹಿಳೆಯರು ಜಿಲ್ಲಾಧಿಕಾರಿಗಳ ಎದುರು ಪ್ರತಿಭಟನೆ ನಡೆಸಿ ತಮ್ಮ ಗ್ರಾಮಗಳಲ್ಲಿ ಸಾರಾಯಿ ಮಾರಾಟ ನಿಷೇಧಿಸಬೇಕೆಂದು ಜಿಲ್ಲಾಧಿಕಾರಿಗಳಿಗೆ ಒತ್ತಾಯಿಸಿದರು.

# ಬಾಲ್ಯವಿವಾಹದ ವಿರುದ್ಧ ಹೋರಾಡಿದ ವೈದ್ಯೆ

ಇಂದು ರಾಜಸ್ಥಾನದ ಭತೇರಿಗ್ರಾಮದ ಭಾಂವ್ರಿದೇವಿ 'ಬಾಲ್ಯವಿವಾಹ' ದ ವಿರುದ್ಧದ ಚಳುವಳಿಯ ಸಂಕೇತವಾಗಿದ್ದಾಳೆ. ಆಕೆ ಸ್ವತಃ ತಾನೇ ಬಾಲ್ಯವಿವಾಹದ ಕೂಪಕ್ಕೆ ಸಿಲುಕಿ ನೋವನ್ನುಂಡವಳು, ತನ್ನ ಒಬ್ಬ ಹೆಣ್ಣು ಮಗಳ ಬಾಲ್ಯವಿವಾಹವನ್ನು ನಿಲ್ಲಿಸಲಾಗದೆ ಅಸಹಾಯಕಳಾದರೂ ಧೈರ್ಯಗುಂದದ ಭಾಂವ್ರಿ, ಸಾಮಾಜಿಕ ಹೋರಾಟಕ್ಕೆ ತನ್ನನ್ನೇ ಅರ್ಪಿಸಿಕೊಂಡವಳು. ಸಾಮಾಜಿಕ ಪಿಡುಗಾದ ಬಾಲ್ಯವಿವಾಹದ ವಿರುದ್ಧ 'ಸಾಥಿನ್'ಳಾಗಿ ಕಾರ್ಯಪ್ರವೃತ್ತಳಾದ ಭಾಂವ್ರಿ ತೆತ್ತ ಬೆಲೆ ಯಾರೂ ಊಹಿಸದಂತಹುದು. ಬಾಲ್ಯವಿವಾಹ ನಿಲ್ಲಿಸಿದ್ದಕ್ಕಾಗಿ ಮೇಲುಜಾತಿಯವರಿಂದ ಸಾಮೂಹಿಕ ಅತ್ಯಾಚಾರಕ್ಕೆ ಗುರಿಯಾದರೂ ನ್ಯಾಯಕ್ಕಾಗಿ ದಿಟ್ಟ ಹೋರಾಟ ನಡೆಸಿದ ಅಪ್ರತಿಮ ಸ್ತ್ರೀಶಕ್ತಿ ಭಾಂವ್ರಿದೇವಿ.

ಚರಿತ್ರೆಯ ಪುಟಗಳಲ್ಲಿ ಇಂತಹ ಸಾಮಾಜಿಕ ಅನಿಷ್ಟಗಳ ವಿರುದ್ಧ ಹೋರಾಡಿದ ಮಹಿಳಾ ರತ್ನಗಳು ಹಲವಾರಿವೆ. ಅಂತಹವರಲ್ಲಿ 'ಬಾಲ್ಯವಿವಾಹ'ದ ವಿರುದ್ಧ ಹೋರಾಡಿದ ಡಾ|| ರುಕ್ಮಿಬಾಯಿಯೊಬ್ಬರು. 1964ರಲ್ಲಿ ಮಹಾರಾಷ್ಟ್ರದಲ್ಲಿ ಜನಿಸಿದ ರುಕ್ಮಿಬಾಯಿಗೆ ಹತ್ತು ವರ್ಷದ ಬಾಲೆಯಾಗಿದ್ದಾಗಲೇ ದಾದಾಜಿಠಾಕೂರರವರೊಂದಿಗೆ ವಿವಾಹವಾಯಿತು. ತನ್ನ ಒಪ್ಪಿಗೆಯಿಲ್ಲದೆ ಬಾಲೆಯಾಗಿದ್ದಾಗಲೇ ನಡೆದ ಈ ವಿವಾಹವನ್ನು ಬಾಲೆ ರುಕ್ಮಾಬಾಯಿ ತಿರಸ್ಕರಿಸಿದಳು ಹಾಗೂ ಪ್ರತಿಭಟಿಸಿದಳು. ಬಾಲ್ಯ ವಿವಾಹಗಳು ಸಮಾಜದ ನೀತಿಯಾಗಿದ್ದಾಗ, ಸಾಂಪ್ರದಾಯಿಕ ಆಚರಣೆಯ ಸಂದರ್ಭವಾಗಿದ್ದಾಗ ರುಕ್ಮಾಬಾಯಿಯ ಪ್ರತಿಭಟನೆ ಎಲ್ಲರಿಗೂ ಅತಿರೇಕವೆನಿಸಿರಲೂ ಸಾಕು. ಗಂಡನ ಮನೆಗೆ ಹೋಗದೆ, ವಿದ್ಯಾಭ್ಯಾಸದಲ್ಲಿ ತೊಡಗಿಸಿಕೊಂಡ ರುಕ್ಮಾಬಾಯಿಯ ಮೇಲೆ ಗಂಡ ವೈವಾಹಿಕ ಸಂಬಂಧವನ್ನು ಊರ್ಜಿತಗೊಳಿಸಿ ಕೊಡಬೇಕೆಂದು ಕಾನೂನಿನ ಮೊರೆ ಹೊಕ್ಕ.

ಗಂಡನ ಹೆಸರನ್ನಾಗಲಿ, ತಂದೆಯ ಹೆಸರನ್ನಾಗಲೀ ತನ್ನ ಹೆಸರಿನೊಂದಿಗೆ ಜೋಡಿಸಿಕೊಳ್ಳದ ರುಕ್ಮಾಬಾಯಿ ಗಂಡನ ಯಾವ ಬೆದರಿಕೆಗೂ ಸೊಪ್ಪುಹಾಕಲಿಲ್ಲ; ಹಾಗೆಯೇ ಸಂಬಂಧಿಗಳ ಮಾತಿಗೂ ಕಿವಿಗೊಡಲಿಲ್ಲ. ಮುಂದೆ ಭಾರತದ ಮೊದಲ ವೈದ್ಯೆಯೆನಿಸಿಕೊಂಡ ರುಕ್ಮಾಬಾಯಿ ಸ್ಕಾಟ್‌ಲೆಂಡಿಗೆ ಅಧ್ಯಯನ ನಡೆಸಲು ಹೋದಳು. ಸಾಮಾಜಿಕ ಸಂಸ್ಥೆಯೊಂದಕ್ಕೆ ಗೌರವ ಕೊಡದ ರುಕ್ಮಾಬಾಯಿಗೆ 'ಆರು ತಿಂಗಳ ಸಜೆ ಅಥವಾ ದಂಡ' ನೀಡಬೇಕೆಂದು ನ್ಯಾಯಾಲಯ ತೀರ್ಪುಕೊಟ್ಟಿತು. ಆದರೂ ಪ್ರವಾಹದ ವಿರುದ್ಧ ಈಜಲು ಹೊರಟ ಈ ವೈದ್ಯೆಗೆ ಸರ್ ಕೌಸ್‌ಜೀ ಜೆಹಂಗೀರ್ ಮತ್ತು ಲೇಡಿ ಜೆಹಂಗೀರ್, ಕಮರುದ್ದೀನ್ ತಾಯಾಬ್ಜಿ ಮತ್ತು ಮಹದೇವ ಗೋವಿಂದ ರಾನಡೆ ಮುಂತಾದ ಮಹನೀಯರು ಬೆಂಬವಾಗಿ ನಿಂತರು. ಅವಳ ಬದಲಾವಣೆಯ ಉದ್ಘೋಷದ ಪ್ರತಿಧ್ವನಿ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿಯೂ ಮೊಳಗಿತು. ಇಷ್ಟಾದರೂ ಗಂಡನಿಂದ ಮಾನನಷ್ಟ ಅಪಮಾನದ ಕ್ರಿಮಿನಲ್ ಆರೋಪಗಳನ್ನು ಹೊರಬೇಕಾಗಿ ಬಂತು. ನಂತರದ ದಿನಗಳಲ್ಲಿ ನ್ಯಾಯಾಲಯದ ಹೊರಗೆ ಈ ಪ್ರಕರಣ ಹೊಂದಾಣಿಕೆಯೊಂದಿಗೆ ಮುಕ್ತಾಯವಾಯಿತು.

ತನಗಿಷ್ಟವಿಲ್ಲದ, ತನ್ನ ಒಪ್ಪಿಗೆಯಿಲ್ಲದೆ ನಡೆದ ವೈವಾಹಿಕ ಸಂಬಂಧದಿಂದ ಮುಕ್ತಳಾಗುವುದು ಭಾರತೀಯ ಸಮಾಜದಲ್ಲಿ ಅಷ್ಟೊಂದು ಸುಲಭವಲ್ಲ. ಅದರಲ್ಲೂ ಒಂದುವರೆ ಶತಕದ ಹಿಂದೆ ಸಾಂಪ್ರದಾಯಿಕ ಭಾರತದಲ್ಲಿ ತನಗಾದ 'ಬಾಲ್ಯವಿವಾಹ'ದ ಬಗ್ಗೆ ಅರಿವು ಬೆಳೆಸಿಕೊಂಡು ಹೋರಾಟ ನಡೆಸಿದ ರುಕ್ಮಾಬಾಯಿಯ ಬದುಕಿನ ನಡೆಯೂ ಅಷ್ಟೇ ರೋಮಾಂಚಕಾರಿಯಾದುದು. ಈ ಮಹಾನ್ ಚೇತನವನ್ನು ಕುರಿತು ಡಾ। ಮೋಹಿನಿ ವರದೆಯವರು ರಚಿಸಿದ 'Dr. Rukmabai - an odyssey' ಕೃತಿಯ ಇತ್ತೀಚೆಗೆ ಮಹಾರಾಷ್ಟ್ರದಲ್ಲಿ ಬಿಡುಗಡೆಯಾಯಿತು. ಸ್ತ್ರೀಸಮುದಾಯಕ್ಕೆ ಕಳಶಪ್ರಾಯವಾದ ಈ ಸ್ತ್ರೀರತ್ನಕ್ಕೆ ಅಪಾರ ಪ್ರಶಂಸೆಯ ಸುರಿಮಳೆಯಾಯಿತು.

ಇಂದು ಡಾ। ರುಕ್ಮಾಬಾಯಿಯ ಭಾವಚಿತ್ರವು ಮುಂಬಯಿಯ ವಿಶ್ವವಿದ್ಯಾನಿಲಯದಲ್ಲಿ ರಾರಾಜಿಸುತ್ತಿದೆ. ವೈದ್ಯ ಶಾಸ್ತ್ರದಲ್ಲಿ ಅತ್ಯಂತ ಹೆಚ್ಚು ಅಂಕಗಳಿಸುವ ವಿದ್ಯಾರ್ಥಿನಿಗೆ ಡಾ। ರುಕ್ಮಾಬಾಯಿಯ ಹೆಸರಿನಲ್ಲಿ ದತ್ತಿ ಬಹುಮಾನವೊಂದನ್ನು ಇ.ಎನ್.ಟಿ. ತಜ್ಞ ಡಾ। ಎಲ್.ಎಚ್.ಹೀರಾನಂದಾನಿಯವರು ಕೊಡಮಾಡಿದ್ದಾರೆ.

ಹೀಗೆ ವೈದ್ಯಕೀಯ ಕ್ಷೇತ್ರದಲ್ಲಿ ಅಪ್ರತಿಮ ಹೆಸರು ಮಾಡಿದ ಡಾ। ರುಕ್ಮಾಬಾಯಿ ಭಾರತದಲ್ಲಿ ರೆಡ್‌ಕ್ರಾಸ್ ಸಂಸ್ಥೆಯ ಆರಂಭಗಾರರಲ್ಲಿ ಒಬ್ಬರಾಗಿದ್ದಾರೆ. ಇಷ್ಟೆಲ್ಲ ಸಾಧನೆಗಳಿದ್ದರೂ ಡಾ। ರುಕ್ಮಾಬಾಯಿಯನ್ನು ಮಹಾರಾಷ್ಟ್ರದ ಜನತೆ ವಿಶೇಷವಾಗಿ ನೆನೆಯುವುದು ಆಕೆಯ 'ಬಾಲ್ಯವಿವಾಹ'ದ ವಿರುದ್ಧದ ಹೋರಾಟ ಗಾರ್ತಿಯೆಂದೇ. ಕೋರ್ಟಿನ ದಾವೆಗಳಿಂದ ಒಂದಿನಿತೂ ವಿಚಲಿತಳಾಗದ ರುಕ್ಮಾಬಾಯಿ, ಪತ್ರಿಕೆಗಳ ಮೂಲಕ ಬಾಲ್ಯದ ವಿವಾಹ ವಿರುದ್ಧ ಸಮರ ಹೂಡಿದರು. 'ನಾನು ಜೈಲಿಗಾದರೂ ಹೋಗುತ್ತೇನೆ. ಆದರೆ ನನ್ನ ಒಪ್ಪಿಗೆಯಿಲ್ಲದೆ ಚಿಕ್ಕಂದಿನಲ್ಲೇ ನಡೆದು ಹೋದ ಮದುವೆಗೆ ಮಾತ್ರ ತಲೆ ಕೊಡುವುದಿಲ್ಲ', ಎನ್ನುವುದು ಅವರ ದೃಢ ನಿರ್ಧಾರವಾಗಿತ್ತು. ಅವರ ಖಾಸಗಿ ಬದುಕಿನ ಸುಖಕ್ಕಿಂತ 'ಬಾಲ್ಯವಿವಾಹ' ಅತ್ಯಂತ ಕೆಟ್ಟದು ಎಂಬುದೇ ಡಾ। ರುಕ್ಮಾಬಾಯಿಯವರ ಬಾಳದರ್ಶನವಾಗಿತ್ತು. ಅದಕ್ಕಾಗಿ ಜೀವಿತದ ಕೊನೆಯವರಿಗೂ ಹೋರಾಡಿದರು.

ಆಧಾರ : ದಿ ಹಿಂದೂ

★ ★ ★

# ಸೇಲ್.... ಸೇಲ್....

'ಸೇಲ್'.... 'ಭಾರೀ ಮಾರಾಟ' - ನಗರದ ಯಾವುದೇ ಬಡಾವಣೆಗೆ ಹೋಗಿ. ಈ ಫಲಕಗಳು ಕಾಣಸಿಗುತ್ತವೆ; ಒಂದೋ ಎರಡೋ ಸೇಲ್‌ಗಳು ನಡೆಯುತ್ತಿರುತ್ತವೆ. ಅದು ಸೀರೆಯ ಸೇಲೇ ಆಗಿರಬಹುದು, ಪುರುಷರ ಉಡುಪಿನದೇ ಆಗಿರಬಹುದು, ಅಥವಾ ಆಭರಣಗಳದ್ದೋ, ಗೃಹೋಪಕರಣಗಳದ್ದೋ, ಚಪ್ಪಲಿಯದೋ ಆಗಿರಬಹುದು. ಒಟ್ಟಿನಲ್ಲಿ ಈ 'ಸೇಲ್' ಎನ್ನುವುದು ಸರ್ವವ್ಯಾಪಿಯಾಗಿದೆ ಎನ್ನುವುದಂತೂ ನಿಜ.

ಈ 'ಸೇಲ್' ನಗರಗಳಿಗೆ ಮಾತ್ರ ಸೀಮಿತವೇ?

ಇಲ್ಲ, ಇದು ಹಳ್ಳಿಗಳಿಗೂ ವ್ಯಾಪಿಸಿದೆ. ಹಳ್ಳಿಗಳಷ್ಟೇ ಏಕೆ, ಕುಗ್ರಾಮವನ್ನೂ ತಲುಪಿದೆ ಸೇಲ್ ಸಂಸ್ಕೃತಿ. ಆದರೆ ಇಲ್ಲಿ ಸ್ವಾಭಾವಿಕವಾಗಿಯೇ ಕೆಲವು ವ್ಯತ್ಯಾಸಗಳಿವೆ. ಮೊದಲನೆಯದಾಗಿ, ಇಲ್ಲಿನ 'ಸೇಲ್' ಬಹಿರಂಗವಾಗಿ ನಡೆಯುವಂಥದ್ದಲ್ಲ. ಎಲ್ಲವೂ ಒಳಗೊಳಗೇ ಚುಪ್ಕೆ ಚುಪ್ಕೆ. ಎರಡನೆಯದಾಗಿ ಇಲ್ಲಿ ಬಟ್ಟೆ-ಪಾತ್ರೆ-ಆಭರಣಗಳ ಸೇಲ್ ನಡೆಯುವುದಿಲ್ಲ. ಅದಕ್ಕೂ ಎರಡು ಕಾರ್ಣಗಳಿವೆ. ಒಂದು, ಕೊಳ್ಳುಬಾಕ ಸಂಸ್ಕೃತಿ ಇಲ್ಲಿಲ್ಲ; ಎರಡು, ಒಂದೊಂದು ದಿನ ತಳ್ಳುವುದು ಈ ಜನರಿಗೆ ಅತಿ ದುರ್ಭರ. ಇಲ್ಲಿ ಆಗುವುದೇನಿದ್ದರೂ ಅತ್ಯಂತ ತೂಕದ, ಆದರೆ ಅಷ್ಟೇ ಅಗ್ಗದ ಸೇಲ್. ಏನಿದು, ಒಗಟೊಗಟು ಅನ್ನುವಿರಾ? ಒಗಟೇನು ಬಂತು. ಎಲ್ಲ ಬಯಲಾಗುತ್ತ ಇದೆಯಲ್ಲ ಇಲ್ಲಿ ನಡೆಯೋ ಮಕ್ಕಳ ಮಾರಾಟದ ಸಂಗತಿಗಳು. ನಮ್ಮ ದೇಶದಲ್ಲಿ ಹಳ್ಳಿಗಳಿಗೂ ನಗರಗಳಿಗೂ ಇರುವ ಅನೇಕ ಅಂತರಗಳಲ್ಲಿ ಇದೂ ಒಂದು. ಜೀರ್ಣಿಸಿಕೊಳ್ಳಲಾಗದ ದುರಂತಗಳಲ್ಲಿ ಇದೂ ಒಂದು. ಪ್ರಾಯಶಃ ಇದು ನಗರಗಳಲ್ಲೂ ನಡೆಯುತ್ತಿರುತ್ತದೆ. ಇನ್ನೂ ಬೆಳಕಿಗೆ ಬಂದಿಲ್ಲ ಅಷ್ಟೆ.

ಮಕ್ಕಳ ಮಾರಾಟದ ಸುದ್ದಿ ನಮಗೆಲ್ಲ ದಿಗ್ಭ್ರಮೆಯನ್ನೇನೋ ಉಂಟುಮಾಡಿತು. ಆದರೆ ನೆರೆಯ ಆಂಧ್ರಪ್ರದೇಶದಲ್ಲಿ, ನಮ್ಮದೇ ಗಡಿಭಾಗದ ಗುಲ್ಬರ್ಗಾ ಮುಂತಾದೆಡೆ ಇದು ಸಾಮನ್ಯವೆಂಬಂತಾಗಿ ಬಿಟ್ಟಿದೆ.

ಮಕ್ಕಳನ್ನು ಯಾಕೆ ಮಾರುತ್ತಾರೆ?

ಉತ್ತರ ಬಲು ಸರಳ. ಹಣಕ್ಕಾಗಿಯಲ್ಲದೆ ಮತ್ತ್ಯಾಕೆ ತಾನೆ ಮಾರುತ್ತಾರೆ? ಆದರೂ, ತಮ್ಮ ಸ್ವಂತ ಮಕ್ಕಳನ್ನು ಹೇಗೆ ತಾನೇ ಮಾರುತ್ತಾರೋ, ಹೇಗೆ ತಾನೆ ಮನಸ್ಸು ಬಂದಿತೋ ಎಂದು ನಾವಿಲ್ಲಿ ಕುಳಿತು ಯೋಚಿಸುತ್ತೇವೆ. ಆದರೆ ಬಡತನ ಹಾಗೆ ಮಾಡಿಸುತ್ತದೆ. ಅಲ್ಲಿದೆ ಮಕ್ಕಳು ಜಾಸ್ತಿ ಇದ್ದು, ದಾರಿದ್ರ್ಯ ಕಿತ್ತು ತಿನ್ನುತ್ತಿದ್ದಾಗ, ಕೈಗೊಂದಿಷ್ಟು ಕಾಸು ಬಂದರೆ ಸಾಕು ಎನ್ನುವ ತವಕ - ಹಪಾಹಪಿ ಇದ್ದೀತು.

ಮಕ್ಕಳನ್ನು ಮಾರುವ ಈ ಮಂದಿ ಸಾಮಾನ್ಯವಾಗಿ ಲಂಬಾಣಿ ಜನಾಂಗದವರು. ಅತ್ಯಂತ ಹಿಂದುಳಿದ ಜಿಲ್ಲೆ ಎನಿಸಿಕೊಂಡಿರುವ ಗುಲ್ಬರ್ಗಾದಲ್ಲಿ 110 ಲಂಬಾಣಿ ತಾಂಡಾಗಳಿವೆ. ಇವರ ಅಂದಾಜು ಜನಸಂಖ್ಯೆ 90,000. ಪ್ರತಿಕುಟುಂಬದಲ್ಲಿಯೂ 5-6ಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲೇ ಮಕ್ಕಳಿದ್ದಾರೆ. ಇವರ ಪೈಕಿ ಹುಡುಗಿಯರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ ಎನ್ನುವುದು ಒಂದು ಅಂಶ. ಪ್ರಾಯಶಃ ಅವರಿಗೆ 'ಮುಳ್ಳಾಗಿರುವ' ಅಂಶ.

ಲಂಬಾಣಿ ಜನರಿಗೆ ಯಾವುದೇ ನಿರ್ದಿಷ್ಟ ಉದ್ಯೋಗವಿಲ್ಲ. ದಿನಗೂಲಿಯ ಮೇಲೆ ದುಡಿಯುತ್ತಾರೆ. ಹೀಗಾಗಿ ಒಪ್ಪತ್ತು ಊಟದ್ದೂ ಗ್ಯಾರಂಟಿ ಇರುವುದಿಲ್ಲ.

ಆಂಧ್ರಪ್ರದೇಶ ಹಾಗೂ ಕರ್ನಾಟಕದ ತಾಂಡೂರಿನಲ್ಲೇ ಅನೇಕ ಲಂಬಾಣಿ ತಾಂಡಾಗಳಿವೆ. ಇಲ್ಲಿ ಪ್ರತಿಯೊಂದು ಮನೆಯಲ್ಲೂ ಮಕ್ಕಳ ಮಾರಾಟವಾಗಿವೆ. ಮಕ್ಕಳ ಮಾರಾಟಕ್ಕೆ ಬಡತನ ಒಂದೇ ಕಾರಣವಾಗಿಲ್ಲ; ಮೂಢನಂಬಿಕೆಯೂ ಒಂದು ಕಾರಣವಾಗಿದೆ. ಹೆಣ್ಣುಮಗುವಿನ ಮಾರಾಟದಿಂದ ಗಂಡು ಮಗು ಹುಟ್ಟುತ್ತದಂತೆ.

ಯಾವುದೇ ವಸ್ತುವನ್ನು ಮಾರುವವರಿದ್ದಾಗ, ಕೊಳ್ಳುವವರೂ ಇದ್ದೇ ಇರುತ್ತಾರಷ್ಟೆ, ಇವರಿಬ್ಬರ ಅವಶ್ಯಕತೆ ಏನೆಂದು ಬಲ್ಲಂಥ ದಲ್ಲಾಳಿಗಳೂ ಇರುತ್ತಾರೆ. ಈ ಕ್ಷೇತ್ರದಲ್ಲಿ ದಲ್ಲಾಳಿಗಳು ಸಾಮಾನ್ಯವಾಗಿ ಸೂಲಗಿತ್ತಿ-ಕಂ-ದಲ್ಲಾಳಿಗಳಾಗಿರುತ್ತಾರೆ. ಯಾವ ತಾಂಡಾದಲ್ಲಿ ಯಾರಿಗೆ ಯಾವಾಗ ಮಗುವಾಗಲಿವೆ. ಈ ಎಲ್ಲ ಮಾಹಿತಿ ಅವರು ಸಂಗ್ರಹಿಸಿರುತ್ತಾರೆ. ಅತ್ತ ಅವ್ಯವಹಾರದ ಕೇಂದ್ರಗಳೊಂದಿಗೆ ತಮ್ಮ ವ್ಯವಹಾರ ಕುದುರಿಸಿಕೊಳ್ಳುತ್ತಾರೆ.

ಮಗು ಹುಟ್ಟುತ್ತಿದ್ದಂತೆಯೇ. ಅದು ಹೆಣ್ಣು ಎಂದು ತಿಳಿದ ತಕ್ಷಣವೇ ನಮ್ಮ ಅನೇಕ ಹಳ್ಳಿಗಳಲ್ಲಿ ಅದನ್ನು ಅಮಾನುಷವಾಗಿ ಸಾಯಿಸಲಾಗುತ್ತದೆ. ಆದರೆ ಇಲ್ಲಿ ಸೂಲಗಿತ್ತಿಗೆ ಹೆಣ್ಣು ಮಗು ಎಂದಾಕ್ಷಣ ಸ್ವಲ್ಪ ನೆಮ್ಮದಿಯಾಗುತ್ತದೆ. ಆ ಮಗುವನ್ನು ತನ್ನ ಸುಪರ್ದಿಗೆ ತೆಗೆದುಕೊಂಡು, 'ನೆಮ್ಮದಿ'ಯ ಸ್ವಲ್ಪ ಪಾಲನ್ನು ಆ ಕೂಸಿನ ತಂದೆತಾಯಿಗೂ ಕೊಡುತ್ತಾಳೆ. ಅವರಿಗೆ ಸಿಗುವ ನೆಮ್ಮದಿಯ ಪಾಲಾದರೂ ಎಷ್ಟಿದ್ದಿರಬಹುದು? ಹೆಚ್ಚೆಂದರೆ 500

ರಿಂದ 1500 ರೂಗಳಷ್ಟು. ಹೀಗೆಯೇ ವಸ್ತು ವಿನಿಮಯವಾಗುತ್ತದೆ. ಮೂರು ದಿನಗಳಷ್ಟು ಎಳೆಗೂಸು ಕೈಗಳನ್ನು ದಾಟುತ್ತ ಹೋಗುತ್ತದೆ. ತನ್ನನ್ನೆತ್ತಿಕೊಂಡ ಕೈಗಳಲ್ಲಿ ಒಂದಿಷ್ಟು ಹಣ ಬರುವಂತೆ ಮಾಡುತ್ತದೆ.

ಹೀಗೆ ಮಕ್ಕಳನ್ನು ಮಾರಲು ತಾಯಂದಿರಿಗೆ ಮನಸ್ಸಾದರೂ ಹೇಗೆ ಬಂದೀತು ಎಂಬ ಪ್ರಶ್ನೆ ಮೂಡುವುದು ಸಹಜವೇ. 'ಹೊಟ್ಟೆಗೆ ಹಿಟ್ಟಿಲ್ಲವೆಂದಾಗ ಮನಸ್ಸು ಬರದೇ ಏನು' ಎಂದು ಒಬ್ಬಳೆಂದರೆ, 'ನಾನು ಮಾರದೇ ಹೋಗಿದ್ದಿದ್ದರೆ, ಆ ಮಗು ಉಪವಾಸ ಬಿದ್ದು ಸಾಯುತ್ತಿತ್ತು' ಎಂದು ಮತ್ತೊಬ್ಬಳು ಹೇಳುತ್ತಾಳೆ. ಈ ಸಂದರ್ಭದಲ್ಲಿ ಇವರ ಅನಿಸಿಕೆಗಳನ್ನು ಅನುಮೋದಿಸುವಂಥ ಹಳೆಯ ಕನ್ನಡ ಗೀತೆಯೊಂದರ ಸಾಲು ನೆನಪಿಗೆ ಬರುತ್ತದೆ.

ಉಣ್ಣಲು ಉಡಲು ಬರಬಂದಾಗ
ಮಕ್ಕಳೆ ಬಾಳಿನ ಬೆರಿಕೆ ನೆಲೆ
ಊಟಕೆ ಗೋಳು ನಿದ್ದೆಯು ಹಾಳು
ಸಾಯುವುದೊಂದೆ ಬಾಳ ನೆಲೆ

ಇವರ ಮಾತಿನಲ್ಲಿ ಸತ್ಯಾಂಶವೂ ಇದೆ. ಉಣ್ಣುವ ಬಾಯಿಗಳು ಜಾಸ್ತಿ ಆದಾಗ, ಬರುವ ವರಮಾನ ಯಾತಕ್ಕೂ ಸಾಲದು. ಜೊತೆಗೆ ಅವರ ರೀತಿ-ರಿವಾಜುಗಳೂ ಕಡಿಮೆಯೇನಿಲ್ಲ. ಹೆಣ್ಣುಮಕ್ಕಳ ಮದುವೆಗೆ ಎಷ್ಟೇ ಬಡವರೆನಿಸಿಕೊಂಡವರು ಕೂಡ ಕಡೇ ಪಕ್ಷ 10000ರೂ ಖರ್ಚು ಮಾಡುತ್ತಾರಂತೆ ಎರಡು ತೊಲ ಬಂಗಾರ ಕೊಡಬೇಕಂತೆ.

ಇಲ್ಲಿ ದಿನಗೂಲಿ ಮಹಿಳೆಯರಿಗೆ ದಿನಕ್ಕೆ 15ರೂ ಸಿಗುತ್ತದೆ; ಅದೇ ಪುರುಷರಿಗೆ 25ರಿಂದ 30ರೂ ಸಿಗುತ್ತದೆ. ಹೀಗಾಗಿ ಒಂದು ಕುಟುಂಬದಲ್ಲಿ ಪುರುಷರ ಸಂಖ್ಯೆ ಜಾಸ್ತಿಯಿದ್ದಷ್ಟು ವರಮಾನವೂ ಹೆಚ್ಚು ಎನ್ನುವ ಭಾವನೆ ಅವರದು. ಆದರೆ ಕೂಲಿ ಕೆಲಸ ಸಿಗದಿದ್ದಾಗ ಈ ಮಹಿಳೆಯರು ಬೀಡಿ ಕಟ್ಟುತ್ತಾರೆ. 200 ಬೀಡಿಗಳಿಗೆ 30 ರೂ ಸಿಗುತ್ತದೆ. ಆದರೆ ಪುರುಷರು ಬೀಡಿ ಕಟ್ಟುವುದಿಲ್ಲ. ಏಕೆಂದರೆ ಅವರ 'ಪ್ರತಿಷ್ಠೆ'ಗೆ ಇದು ಸಲ್ಲುವುದಿಲ್ಲ. ಪರಿಣಾಮವೇನೆಂದರೆ, ಒಣ ಪ್ರತಿಷ್ಠೆಗಳಿಗೆ ಹೆಣ್ಣುಕೂಸುಗಳು ಬಲಿಯಾಗುತ್ತವೆ. ಈ ಕೂಸುಗಳಿಗೆ ಅರಿವು ಬರುವ ಮೊದಲೇ ಅವನ್ನು ಎತ್ತಾಡಿಸುವ ಕೈಗಳ ಬದಲಾವಣೆ ಆಗುತ್ತದೆ. ಇದರಲ್ಲಿ ದತ್ತು ಕೇಂದ್ರಗಳ ಪಾತ್ರವೂ ಇದೆ ಎಂದರೆ... ಬೇಲಿಯೇ ಎದ್ದು ಹೊಲವನ್ನು ಮೇಯ್ದಂತೆ, ಮಕ್ಕಳನ್ನು ಒಳ್ಳೆಯ ಮನೆಗಳಿಗೆ ಸೇರಿಸಬೇಕಾದ ಕೇಂದ್ರಗಳು ಬೇರೆಯೇ ಜಾಡಿನಲ್ಲಿ ನಡೆದಾಗ ಸಮಸ್ಯೆ ಮತ್ತೂ ಗಂಭೀರವಾಗುತ್ತದೆ. ಕೆಲವು ಕೇಂದ್ರಗಳು ಪರವಾನಗಿ ಇಲ್ಲದೆಯೇ ಕಾರ್ಯ ನಿರ್ವಹಿಸುತ್ತಿವೆ ಎಂದಾಗ ಇದು ಮತ್ತಷ್ಟು ಜಟಿಲವಾಗುತ್ತದೆ. ದತ್ತು ಕೇಂದ್ರಗಳ ವೈಭವೋಪೇತ ಸೌಲಭ್ಯಗಳು ಅಲ್ಲಿನ ವಿನಿಮಯಗಳು ಬಗ್ಗೆ ಗುಮಾನಿ ಹುಟ್ಟಿಸುತ್ತವೆ. ಇಲ್ಲಿಂದ ಹೊರಹೋಗುವ ಮಕ್ಕಳು ಒಳ್ಳೆಯ ಮನೆಯನ್ನೇ ಸೇರಬಹುದು; ಆದರೆ ಸೇರದಿರುವ ಸಾಧ್ಯತೆಗಳನ್ನೂ ತಳ್ಳಿ ಹಾಕುವಂತಿಲ್ಲ.

ಈ ಎಲ್ಲ ಹಿನ್ನೆಲೆಯಲ್ಲಿ ಸ್ಪಷ್ಟವಾಗುವ ಅಂಶವೇನೆಂದರೆ ಕೆಲವರ ಬಡತನ / ಮೌಢ್ಯತೆಗಳು ಮತ್ತೊಬ್ಬರಿಗೆ ಬಂಡವಾಳವಾಗುತ್ತವೆ.

- ಹೆಚ್. ಎಸ್. ಗೀತಾ

ನಮ್ಮ ದೇಶದಲ್ಲಿ ಒಂದು ಚಹಾಪುಡಿಯ ಬೆಲೆ
ಕೆಜಿಗೆ 4000 ರೂಗಳಷ್ಟು ಕೂಡ ಇದೆ.
ಆದರೆ 'ಜೀವ'ದ ಬೆಲೆ ಮಾತ್ರ ಅಗ್ಗ;
ಅದರಲ್ಲೂ ಹೆಣ್ಣು ಜೀವದ ಬೆಲೆ ಮತ್ತಷ್ಟೂ ಅಗ್ಗ.
ಕಾಸಿಗೊಂದು, ಕೊಸರಿಗೊಂದು.

1ನೇ ಪುಟದಿಂದ.....

ನಮ್ಮ ದೇಶದಲ್ಲಿ ಬಡವರಿಗೆ, ನಿರುದ್ಯೋಗಿಗಳಿಗೆ, ಅಸಹಾಯಕರಿಗೆ ಸಾಮಾಜಿಕ ಭದ್ರತಾ ವ್ಯವಸ್ಥೆ ಇಲ್ಲ. ಅಮೇರಿಕಾ, ಯೂರೋಪ್, ಆಸ್ಟ್ರೇಲಿಯಾ ಮುಂತಾದ ದೇಶಗಳಲ್ಲಿಯೂ ಕನಿಷ್ಠ ಜೀವ ಹಿಡಿದುಕೊಂಡಿರುವ ಸರ್ಕಾರದಿಂದ ಆರ್ಥಿಕ ಸಹಾಯ ದೊರಕುತ್ತದೆ. ನಮ್ಮಲ್ಲಿಯೂ ಇಂತಹ ಅತ್ಯಂತ ಹೀನ ಸ್ಥಿತಿಯಲ್ಲಿರುವವರಿಗೆ ಜಾತಿ-ಧರ್ಮ-ಭಾಷೆ-ಲಿಂಗ ಇತ್ಯಾದಿಗಳ ಭೇದವಿಲ್ಲದೇ ಸಮಾನವಾಗಿ ಕನಿಷ್ಠ ಆರ್ಥಿಕ ನೆರವು, ನಿರ್ದಿಷ್ಟ ಕಾಲದವರೆಗಾದರೂ ಕೊಡುವ ವ್ಯವಸ್ಥೆ ಮಾಡಬಹುದೇ? ವಕ್ಫ್‌ಬೋರ್ಡ್ ಬದಲು ಎಲ್ಲಾ ಧರ್ಮದ ಇಂತಹ ನಿರ್ಗತಿಕ ಮಹಿಳೆಯರು-ಮಕ್ಕಳು ಅರ್ಜಿಸಲ್ಲಿಸಬಹುದಾದ ಕನಿಷ್ಠ ಆರ್ಥಿಕ ನೆರವು ಪಡೆಯಬಹುದಾದ ಒಂದು ಸಂಸ್ಥೆಯನ್ನು ಸ್ಥಾಪಿಸಿ, ಅದಕ್ಕೆ ರಾಜ್ಯ ಸರ್ಕಾರ ಸೂಕ್ತಧನಸಹಾಯ ಒದಗಿಸಿ ಅದನ್ನು ನ್ಯಾಯಾಲಯದ ಅಧೀನಕ್ಕೆ ಒಳಪಡಿಸಿದರೆ ಉತ್ತಮವಲ್ಲವೆ?

- ಹೇಮಲತಾ ಮಹಿಷಿ

## ಕನ್ನಡ ವೆಬ್‌ಸೈಟ್

# ಕನ್ನಡ ಮಹಿಳೆ ಡಾಟ್ ಕಾಂ.

## ಪ್ರಪ್ರಥಮ ಮಹಿಳಾ ಕನ್ನಡ ಎಲೆಕ್ಟ್ರಾನಿಕ್ ಪತ್ರಿಕೆ.

ವಿಶ್ವದಾದ್ಯಂತ ಇರುವ ಸಮಾನ ಮನಸ್ಕರಾದ ಕನ್ನಡ ಮಹಿಳಾ ಓದುಗ ವರ್ಗವನ್ನು ಒಂದು ವೇದಿಕೆಯಡಿಯಲ್ಲಿ ತರುವುದು ಈ ಪತ್ರಿಕೆಯ ಮೊದಲ ಉದ್ದೇಶ.

ಇದು ಕೇವಲ ಚಾಟ್‌ಸೈಟಲ್ಲ. ಚಾಟ್ ಆದರೆ ಇಬ್ಬರು ಮಾತ್ರ ತಮ್ಮ ಅನಿಸಿಕೆಗಳನ್ನು ಪರಸ್ಪರ ಹಂಚಿಕೊಳ್ಳಬಹುದು. ಆದರೆ ಕನ್ನಡ ಮಹಿಳೆ.ಕಾಂ ನಲ್ಲಿ ಎಲ್ಲರ ಅನಿಸಿಕೆಗಳನ್ನು ಒಟ್ಟು ಕೂಡಿಸಿ ವಿಶ್ವದಾದ್ಯಂತ ರವಾನಿಸಲಾಗುತ್ತದೆ ಮತ್ತು ಆಸಕ್ತರೆಲ್ಲರೂ ಇದಕ್ಕೆ ಸ್ಪಂದಿಸುತ್ತಾರೆ.

ಮುದ್ರಣ ಕ್ಷೇತ್ರದಂತೆ ಉದ್ದುದ್ದದ ಲೇಖನಗಳು ವೆಬ್ ಸೈಟಿನಲ್ಲಿರುವುದಿಲ್ಲ. ಬದುಕಿನ ಎಲ್ಲ ಕ್ಷೇತ್ರಗಳ ಬಗ್ಗೆ ಚಿಕ್ಕ ಚಿಕ್ಕ ನುಡಿ ಚಿತ್ರಗಳಿಗೇ ಇದರಲ್ಲಿ ಆದ್ಯತೆ. ಬಣ್ಣದ ಭಾವಚಿತ್ರಗಳೂ, ರೇಖಾ ಚಿತ್ರಗಳೂ ಇತರ ಕಂಪ್ಯೂಟರ್ ಗಿಮಿಕ್ಸ್‌ಗಳೂ ಧಾರಾಳ ಲಭ್ಯ.

ತಾಯ್ನಾಡನ್ನು ಬಿಟ್ಟು ದೂರದೂರಿನಲ್ಲಿ ತೌರನ್ನು ನೆನಸುತ್ತಾ ಕಂಬನಿ ತುಂಬುವ ಪುಟ್ಟ ಗೆಳತಿಯರಿಗೆ ಸಾಂತ್ವನಗೊಳಿಸಬಲ್ಲ ತಾಯ್ನುಡಿಯ ಆಪ್ತ ಸಲಹೆ ಈ ಪೇಜಿನಲ್ಲಿ ಲಭ್ಯ.

ಸಣ್ಣ ಕತೆ, ಕವನ, ಸಂದರ್ಶನ, ಜಾಗತಿಕ ಸಮಸ್ಯೆಗಳ ಬಗ್ಗೆ ಚರ್ಚೆ, ಸಮಯದ ಸದುಪಯೋಗಕ್ಕೆ ಸಲಹೆ, ಹಾಸ್ಯ, ಬುದ್ಧಿಯ ಸೆಲೆಗಳಿಗೆ ತಲುಪಲೇ ಬೇಕಾದ ಸುದ್ದಿಗಳ, ಇವೆಲ್ಲವೂ ಮಹಿಳಾ ಕೇಂದ್ರಿತವಾಗಿರುತ್ತದೆ. ಮಹಿಳೆಯನ್ನು ಅಡುಗೆ ಮನೆಗೋ ಅಥವಾ ಬರಿ ಶೃಂಗಾರಕ್ಕೋ ಸೀಮಿತಗೊಳಿಸದೆ ಬೇರೆಲ್ಲ ಕ್ಷೇತ್ರಗಳಲ್ಲೂ ಮಹಿಳೆ ಹೇಗೆ ಯಶಸ್ವಿಯಾಗಬಲ್ಲಳು ಎನ್ನುವುದಕ್ಕೆ ಕನ್ನಡಿ ಹಿಡಿಯುವ ಕೆಲಸವನ್ನು ''ಕನ್ನಡ ಮಹಿಳೆ ಡಾಟ್ ಕಾಂ'' ಮಾಡುತ್ತದೆ.

ಇದರ ಪ್ರಧಾನ ಪರಿಕಲ್ಪನೆ ಮತ್ತು ಸಂಪಾದನೆ ಶ್ರೀಮತಿ ಶಾಂತಾನಾಗರಾಜ್ ಅವರದ್ದು. ಇವರೊಂದಿಗೆ ಹಲವು ಯುವ ಪರ್ತಕರ್ತರೂ ಕಂಪ್ಯೂಟರ್ ಪರಿಣತರೂ ಸರಿ ಕಾರ್ಯನಿರ್ವಹಿಸುತ್ತಾರೆ. ಅತ್ಯಂತ ಜನಪ್ರಿಯ ಲೇಖಕ ಲೇಖಕಿಯರೇ ಈ ಪತ್ರಿಕೆಗೆ ಬರೆಯಬೇಕೆಂದೇನಿಲ್ಲ ಮತ್ತು ಮಹಿಳೆಯರು ಮಾತ್ರವೇ ಬರೆಯಬೇಕೆಂದೂ ಇಲ್ಲ. ಯಾರು ಬೇಕಾದರೂ ತಮ್ಮ ಚಿಕ್ಕ ಚಿಕ್ಕ ಲೇಖನ/ಕತೆ/ಕವನಗಳನ್ನು ಈ ವೆಬ್‌ಸೈಟ್‌ಗೆ ಕಳಿಸಬಹುದು. ವಿಳಾಸ ಕೆಳಕಂಡಂತೆ.

**ವೆಬ್‌ಸೈಟ್ ತೆರೆಯಲು** : www.kannadamahile.com

**E.mail Address** : Editor@kannadamahile.come

**ಅಂಚೆ ವಿಳಾಸ** : ಸಂಪಾದಕರು, ಕನ್ನಡಮಹಿಳೆ.ಕಾಂ. 161/16, 7ನೇ ಅಡ್ಡರಸ್ತೆ,
ಒಂದನೇ ಎನ್ ಬ್ಲಾಕ್, ರಾಜಾಜಿನಗರ, ಬೆಂಗಳೂರು-10
ದೂರವಾಣಿ : 3422912

# ಎದೆ ಹಾಲು ಮಕ್ಕಳಿಗೆ ಪರಿಪೂರ್ಣ ಆಹಾರ

ಮಕ್ಕಳಿಗೆ ಎದೆ ಹಾಲು ಒಂದು ಪರಿಪೂರ್ಣ ಮತ್ತು ಆದರ್ಶವಾದ ಆಹಾರ. ಎದೆ ಹಾಲು ಉಂಡು ಬೆಳೆದ ಮಕ್ಕಳು ಬದಲಿ ಆಹಾರಗಳನ್ನು ಬಳಸಿದ ಮಕ್ಕಳಿಗಿಂತ ಕಾಯಿಲೆ ಬೀಳುವುದಾಗಲಿ ಅಥವಾ ಪೌಷ್ಟಿಕಾಂಶಗಳ ಕೊರತೆಯಿಂದ ಬಳಲುವುದಾಗಲಿ ಕಡಿಮೆ. ವಿಶೇಷವಾಗಿ ಬಡ ಸಮುದಾಯಗಳಲ್ಲಿ ಬಾಟಲಿ ಮೂಲಕ ಹಾಲುಣಿಸುವುದು ಲಕ್ಷಾಂತರ ಮಕ್ಕಳ ಪ್ರಾಣ ಮತ್ತು ಆರೋಗ್ಯಕ್ಕೆ ಗಂಭೀರ ಗಂಡಾಂತರವನ್ನೊಡ್ಡುತ್ತದೆ.

ಹುಟ್ಟಿದ ನಾಲ್ಕರಿಂದ ಆರು ತಿಂಗಳವರೆಗೆ ಮಗುವಿಗೆ ಎದೆ ಹಾಲೊಂದೇ ಅತ್ಯಂತ ಉತ್ತಮ ಆಹಾರ. ಎದೆ ಹಾಲುಣಿಸುವಿಕೆಯ ಕೆಲವು ಮುಖ್ಯ ಅಂಶಗಳನ್ನು ಗಮನದಲ್ಲಿಡಬೇಕು.

1. ಪ್ರತಿ ತಾಯಿಯು ತನ್ನ ಮಗುವಿಗೆ ಎದೆ ಹಾಲುಣಿಸಬಹುದು. ಮಗು ಹುಟ್ಟಿದ ತಕ್ಷಣ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ (ಅರ್ಧ ಗಂಟೆಯೊಳಗಾಗಿ) ಮಗುವಿಗೆ ಎದೆ ಹಾಲುಣಿಸಬೇಕು.

2. ಬಾಟಲ್ ಮೂಲಕ ಕುಡಿಸುವುದು ಗಂಭೀರ ಕಾಯಿಲೆಗಳಿಗೆ ದಾರಿ ಮಾಡಬಹುದು. ಅತಿಸಾರ ಬರಬಹುದು, ಹಾಗೂ ಮಗುವಿನ ಸಾವಿಗೆ ಕಾರಣವಾಗಬಹುದು.

3. ಮಗು 2 ವರ್ಷಕ್ಕೆ ಕಾಲಿಟ್ಟಾಗಲೂ ಅದಕ್ಕೆ ಎದೆ ಹಾಲುಣಿಸುವುದನ್ನು ಮುಂದುವರಿಸಬೇಕು.

4. ಎದೆ ಹಾಲುಣಿಸುವುದರಿಂದ ಪೌಷ್ಟಿಕಾಂಶ, ಹೆಚ್ಚಿನ ರೋಗ ನಿರೋಧಕ ಶಕ್ತಿ ಮಗುವಿನಲ್ಲಿ ಉತ್ಪನ್ನವಾಗುತದೆ. ಆಗ ತಾನೆ ಹುಟ್ಟಿದ ಮಗುವಿಗೆ ಎದೆ ಹಾಲಲ್ಲದೆ ಮತ್ತೇನನ್ನು ಅಂದರೆ ನೀರು, ಸಕ್ಕರೆ ನೀರು, ಗ್ಲೂಕೋಸ್ ನೀರು, ಎಣ್ಣೆ, ಜೇನುತುಪ್ಪ, ವಿಟಮಿನ್ ಹನಿಗಳನ್ನು ಟಾನಿಕ್‌ಗಳನ್ನು ಕೊಡಬಾರದು.

*- ಕರ್ನಾಟಕ ವಾರ್ತೆ*

# ಕೋಮುವಾದ, ಕಾಶ್ಮೀರ - ಮಹಿಳೆ, ಇತ್ಯಾದಿ....

- ಉಮಾ ಚಕ್ರವರ್ತಿ

ನವದೆಹಲಿಯ ಮಿರಾಂಡಹೌಸ್‌ನ ಚರಿತ್ರೆಯ ವಿಭಾಗದಲ್ಲಿ ಪ್ರೊಫೆಸರ್ ಆಗಿ ಕಾರ್ಯ ನಿರ್ವಹಿಸುತ್ತಿರುವ ಡಾ। ಉಮಾಚಕ್ರವರ್ತಿ ಅಕೆಡಿಮಿಕ್ ವಲಯದಲ್ಲಿ ಪರಿಚಿತರಷ್ಟೇ ಅಲ್ಲ, ಸಾಮಾಜಿಕ ಕಾರ್ಯಕರ್ತೆಯಾಗಿಯೂ ಗಮನಾರ್ಹರು. ಪೀಪಲ್ಸ್ ಯೂನಿಯನ್ಸ್ ಆಫ್ ಡೆಮಾಕ್ರಟಿಕ್ ರೈಟ್ಸ್‌ನ ಸಕ್ರಿಯ ಕಾರ್ಯಕರ್ತೆಯಾಗಿರುವ ಪ್ರೊ. ಉಮಾ ಚಕ್ರವರ್ತಿ ಇತ್ತೀಚೆಗೆ ಜೂನ್ ತಿಂಗಳಲ್ಲಿ ಕಾಶ್ಮೀರಕ್ಕೆ ಭೇಟಿ ಕೊಟ್ಟಿದ್ದರು. ಪಿಯುಡಿಆರ್‌ನ ಹನ್ನೊಂದು ಕಾರ್ಯಕರ್ತರಲ್ಲಿ ಒಬ್ಬರಾಗಿದ್ದ ಉಮಾಚಕ್ರವರ್ತಿಯವರ ಜೊತೆ ಇನ್ನೂ ಮೂವರು ಮಹಿಳೆಯರು ಕಣಿವೆಯ ರಾಜ್ಯದ ಸ್ಥಿತಿಗತಿಗಳನ್ನು ಖುದ್ದಾಗಿ ಕಂಡು ಬರಲು ಹೋಗಿದ್ದರು. ಇತ್ತೀಚೆಗೆ ನಗರಕ್ಕೆ ಆಗಮಿಸಿದ್ದ ಪ್ರೊ. ಉಮಾಚಕ್ರವರ್ತಿ ಕಾಶ್ಮೀರದಲ್ಲಿ ತಾವು ಕಂಡ ಅನುಭವವನ್ನು ಬೆಂಗಳೂರಿನಲ್ಲಿ ಎರಡು ಬೇರೆ ಉಪನ್ಯಾಸಗಳಲ್ಲಿ ಹಂಚಿಕೊಂಡರು. ಆ ಉಪನ್ಯಾಸಗಳಲ್ಲಿ ಅವರು ಮಾತನಾಡಿದ ಸಂಗತಿಗಳನ್ನು ಎರಡು ಕಂತಿನಲ್ಲಿ 'ಅಚಲ'ದಲ್ಲಿ ಪ್ರಕಟಿಸುತ್ತಿದ್ದೇವೆ. ಮೊದಲ ಕಂತು, ಅವರದೇ ಮಾತುಗಳಲ್ಲಿ ಸಂಕ್ಷಿಪ್ತವಾಗಿ ಇಲ್ಲಿದೆ.

-ಸಂ

ಕಳೆದ ಎರಡು ದಶಕಗಳಲ್ಲಿ ಮಹಿಳಾ ಚಳುವಳಿ ಗಮನಾರ್ಹವಾಗಿ ಎದ್ದು ಕಾಣುತ್ತಿದೆ. ದೇಶದ ಹಲವಾರು ವಿಷಯಗಳಿಗೆ ಮಹಿಳಾ ಚಳುವಳಿ ಸ್ಪಂದಿಸಿದಷ್ಟು ಕಾಶ್ಮೀರದ ಸಮಸ್ಯೆಯನ್ನು ಪರಿಗಣಿಸಿದಂತೆ ಕಾಣುವುದಿಲ್ಲ. 1987ರಿಂದ ಈಚೆಗೆ ಕಾಶ್ಮೀರದ ಪರಿಸ್ಥಿತಿ ಹದಗೆಟ್ಟು ಹೋಗಿದೆ. ನಾವು ಅಲ್ಲಿ ಹೋದಾಗ ಮೊದಲು ಕಣ್ಣಿಗೆ ಹೊಡೆಯುವಂತೆ ಕಂಡಿದ್ದು ಸೈನ್ಯದ ಅಸ್ತಿತ್ವ. ಎಲ್ಲೆಲ್ಲೂ ಸೈನ್ಯವೇ ಸೈನ್ಯ. ಮಿಲಿಟರಿ ರಾಜ್ಯವೆಂಬಂತೆ ಕಾಣುತ್ತದೆ. ಇಂತಹ ಪರಿಸ್ಥಿತಿಯಲ್ಲೂ ನನಗೆ ಅತ್ಯಂತ ಖುಷಿ ತಂದ ಸಂಗತಿಯೆಂದರೆ, ಅಲ್ಲಿನ ಜನ ವಿಶೇಷವಾಗಿ ಹೆಂಗಸರು ಮತ್ತು ಮಕ್ಕಳಲ್ಲಿ ಕಂಡು ಬಂದ ಜೀವನೋತ್ಸಾಹ. ಶಾಲೆ, ಕಾಲೇಜುಗಳಿಗೆ ಹೋಗುವ ವಿದ್ಯಾರ್ಥಿಗಳು ಕೆಲಸಕ್ಕೆ ಹೋಗುವ ಹೆಂಗಸರು ಅಲ್ಲಿನ ಗಂಡಸರಿಗಿಂತ ಹೆಚ್ಚು ಧೈರ್ಯದಿಂದ ಮತ್ತು ನಗು ನಗುತ್ತಾ ತಮ್ಮ ದೈನಂದಿನ ಕಾರ್ಯಗಳಲ್ಲಿ ತೊಡಗಿದ್ದರು. ಅವರ ಸುತ್ತಮುತ್ತ ಬಾಂಬು ಸ್ಫೋಟಗಳು ಕಾಣುತ್ತಿದ್ದರೂ ಒಂದು ರೀತಿಯಲ್ಲಿ ಎಲ್ಲವೂ 'ನಾರ್ಮಲ್' ಅನ್ನುವಂತೆ ಭಾಸವಾಗುತ್ತಿದ್ದವು. ಅವರು ನಮ್ಮನ್ನು ನೋಡಿದಾಗ ಒಂದು ರೀತಿಯ ಖುಷಿಯಿಂದಲೇ ಸ್ವಾಗತಿಸಿದರು. ಅವರಿಗೆ ಸರ್ಕಾರಿ ಜನ ಯಾರು, ಪ್ರವಾಸಿಗರು ಯಾರು ಮತ್ತು human rightsನ ಜನ ಯಾರು ಎನ್ನುವುದು ಗೊತ್ತಿತ್ತು. ಅಲ್ಲಿ ದೊಡ್ಡವರಿರಲಿ, ಸಣ್ಣ ಮಕ್ಕಳಿಗೂ ಅತ್ಯಂತ ಪರಿಚಿತವಾದ ಪದಗಳೆಂದರೆ Human Rights, Killing of innocents ಮತ್ತು custodial killing. ಈ ಪದಗಳನ್ನೂ ಇಂಗ್ಲೀಷಿನಲ್ಲೇ ಉಚ್ಚರಿಸುತ್ತಾರೆ. ಮಾನವ ಹಕ್ಕುಗಳ ವೇದಿಕೆಯ ಯಾರೇ ಹೋಗಲಿ, ಅಭಿಮಾನದಿಂದ ತಬ್ಬಿಕೊಳ್ಳುತ್ತಾರೆ.

ನಾನು ಎರಡೇ ಎರಡು ಘಟನೆಗಳನ್ನು ನಿಮಗೆ ತಿಳಿಸಲು ಇಷ್ಟಪಡುತ್ತೇನೆ. ಇಬ್ಬರು ಹುಡುಗಿಯರನ್ನು ಭೇಟಿ ಮಾಡಿದೆವು. ನಾವು ದಾರಿಯಲ್ಲಿ ಹೋಗುತ್ತಿದ್ದಾಗ ನಮ್ಮನ್ನೊಬ್ಬಳು ಹತ್ತಿರಕ್ಕೆ ಕರೆದಳು. ಅವಳು ಹದಿನೇಳು ವರ್ಷದ ಹುಡುಗಿ. ಅವಳನ್ನು ನಾವು ನೀನು ಏನು ಮಾಡುತ್ತಿದ್ದೀಯ? ಎಂದು ಕೇಳಿದಾಗ, ಅವಳು ನಾನು ಕಾಲೇಜು ಓದುತ್ತಿದ್ದೀನಿ. ಮುಂದೆ ಲಾಯರಾಗಬೇಕೆಂದು ಕೊಂಡಿದ್ದೇನೆ. ವಕೀಲಳಾಗಿ ನಮ್ಮ ಮೇಲಾಗಿರುವ ಶೋಷಣೆಯ ವಿರುದ್ಧ ಹೋರಾಡುತ್ತೇನೆ ಎಂದಳು. 'ನನ್ನ ಸಮಾಜದಲ್ಲಿ ನನಗಾಗಿರುವ ಅನ್ಯಾಯದ ವಿರುದ್ಧ ಮತ್ತು ಭಾರತದ ಸೈನ್ಯ ನಮ್ಮ ಮೇಲೆ ನಡೆಸಿರುವ ದಬ್ಬಾಳಿಕೆಯ ವಿರುದ್ಧವೂ ಹೋರಾಡುತ್ತೇನೆ' ಎಂದಳು. ಅವಳ ತಿಳುವಳಿಕೆ ನಮ್ಮನ್ನು ದಿಗ್ಭ್ರಮೆಗೊಳಿಸಿತು. ಅವಳ ಬದುಕಿನ ಕತೆಯನ್ನು ನಮ್ಮ ಮುಂದಿಟ್ಟಳು. ಅವಳು ತನ್ನ

ಯಿಯ ಗರ್ಭದಲ್ಲಿರುವಾಗಲೇ ತಂದೆ ಅವಳನ್ನು ತ್ಯಜಿಸಿ ೋದನಂತೆ. ಅವಳು ಹುಟ್ಟಿದ ನಂತರ ತಂದೆಯ ನೆಯವರು ಮಗುವನ್ನು ಎತ್ತಿಕೊಂಡು ಹೋದರು. ೀಗಾಗಿ ಅವಳು ತಂದೆಯೂ ಇಲ್ಲದೆ ತಾಯಿಯೂ ಲ್ಲದೆ ಅಜ್ಜಿಯ ಆಶ್ರಯದಲ್ಲಿ ಬೆಳೆಯಬೇಕಾಗಿ ಬಂತು. ಿದ 16ವರ್ಷಗಳು ಅವಳು ತಾಯಿಯನ್ನು ೋಡಿರಲಿಲ್ಲವಂತೆ. ಕಳೆದ ವರ್ಷ ಅವಳ ತಾಯಿಯನ್ನು ೋಡಲು ಹೋದಾಗ ಅವಳ ತಾಯಿ ುರುತಿಸಲಿಲ್ಲವಂತೆ. ಅವಳ ದೇಹದಲ್ಲಿದ್ದ ಹುಟ್ಟು ಚ್ಚೆಯನ್ನು ತೋರಿಸಿ ಅವಳ ಗುರುತಿಸಬೇಕಾಯಿತಂತೆ. ದನ್ನು ಅವಳು ಹೇಳುವಾಗ ದುಃಖ, ನಗು ಎಲ್ಲ ರಿತ್ತು. ಆದರೆ ಲವಲವಿಕೆಯಿಂದಲೇ ಮಾತನಾಡುತ್ತಾ, ಕ್ಕ ಚಿಕ್ಕ ಅನ್ಯಾಯದ ವಿರುದ್ಧ ಹೋರಾಡಿದರೆ, ನಂತರ ೊಡ್ಡ ಹೋರಾಟ ಸುಲಭವಾಗುತ್ತದೆ ಎಂದ ಅವಳ ಶ್ಲೇಷಣೆ ಎಂತಹವರೂ ಒಪ್ಪಿಕೊಳ್ಳಲೇಬೇಕು.

ಮತ್ತೊಬ್ಬ ಮಹಿಳೆಯನ್ನು ನಾವು ಭೇಟಿಮಾಡಿದ್ದು ರ್ವೀನಾ. ಕಾಶ್ಮೀರದಲ್ಲಿ ಮಕ್ಕಳು, ಯುವಕರು - ುಂತಾದವರು ಆಗಾಗ್ಗೆ ತಪ್ಪಿಸಿಕೊಳ್ಳುವ ಘಟನೆ ಹೆಚ್ಚು ಚ್ಚಾಗಿ ನಡೆಯುತ್ತದೆ. ಪರ್ವೀನಾ ಹನ್ನೊಂದು ರ್ಷಗಳ ಹಿಂದೆ ತನ್ನ ಮಗುವನ್ನು ಕಳೆದುಕೊಂಡಿದ್ದಾಳೆ. 00 ಮನೆಗಳಲ್ಲಿ ಈ ರೀತಿ ಮಕ್ಕಳು, ಗಂಡಂದಿರು ಳೆದುಹೋಗಿರುವ ಸಂದರ್ಭಗಳಿವೆ. ಅವಳು ್ರತಿಯೊಂದು ಜೈಲಿಗೆ ಹೋಗಿ ತಮ್ಮ ಮಗನಿಗಾಗಿ ುಡುಕಿದ್ದಾಳೆ. ಎಲ್ಲೂ ಅವನ ಪತ್ತೆ ಇಲ್ಲ. ಅವಳ issing Person's Association' ನ ನೇತಾರಳು. ವಳು ಸರ್ಕಾರದ ವಿರುದ್ಧ ಸಮರ ಹೂಡಿದ್ದಾಳೆ. ಅವಳ ಾಯಿ ಮುಚ್ಚಿಸಲು ಸರ್ಕಾರ ಅವಳಿಗೆ ಅವನ ಮಗನ ದಲಿಗೆ ಒಂದು ಲಕ್ಷ ರೂ. ಕೊಡಲು ಮುಂದೆ ಬಂದಿತು. ದರೆ ಅದನ್ನು ಸಂಪೂರ್ಣವಾಗಿ ನಿರಾಕರಿಸಿದ ರ್ವೀನಾ ನನಗೆ ಹಣ ಬೇಡ, ಮಗ ಬೇಕು. ಅವನು ತ್ತಿದ್ದರೆ ಹೆಣವನ್ನಾದರೂ ಕೊಡಿ, ಎಂದು ಸರ್ಕಾರಕ್ಕೆ ವಾಲು ಹಾಕಿದ್ದಾಳೆ.

ಹೀಗೆ ಬದುಕುವ ಆಸಕ್ತಿ, ಹೋರಾಟದ ಕಿಚ್ಚು ಶ್ಮೀರದ ಮಹಿಳೆಯರಲ್ಲಿ ಜೀವಂತವಾಗಿ ಇದೆ.

* * *

RNI No. 45577/88

"Achala" 108, Skyline Surabhi,
14-9, Vidyapeeta Road, BSK III Stage,
Bangalore - 560 085

To:

Smt/Sri

CPMG/KA/BG-8/2001
Book-Post/News Letter